ಶ್ರೀ ಕುಲಶೇಖರ ಆಳ್ವಾರ್ ವಿರಚಿತ

# ಶ್ರೀ ಮುಕುಂದಮಾಲಾ

(ಕನ್ನಡ-ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ)

***(in Kannada, Sanskrit and English)***



ಹೊಸಮನೆ ಶ್ರೀ ಶ್ರೀನಿವಾಸ ಗೋಪಾಲ

B-17



# ಸಮರ್ಪಣೆ



ಶ್ರೀ ಶ್ರೀಮದಭಿನವವಾಗೀಶಬ್ರಹ್ಮತಂತ್ರಸ್ವತಂತ್ರಪರಕಾಲಸ್ವಾಮಿಗಳವರಿಗೆ
ಭಕ್ತ್ಯಾದರಗಳಿಂದ ಸಮರ್ಪಿಸುವ

**ಹೊಸಮನೆ ಶ್ರೀನಿವಾಸ ಗೋಪಾಲ**

**ಸೌ॥ ಡಾ॥ ಸುಮತಿ ಭರತ್ ಶ್ರೀ ವತ್ಸ**

**ಸೌ॥ ಮೀರಾ ರಘುರಾಮ್**

# ಶ್ರೀ ಕುಲಶೇಖರಾಳ್ವಾರ್

ಕೇರಳದ ಕೋಳಿಕ್ಕೋಡಿನ ರಾಜನಿಗೆ ಬಹಳಕಾಲ ಮಕ್ಕಳಾಗದೆ ಶ್ರಿಯಃ ಪತಿಯನ್ನು ವಿಶೇಷವಾಗಿ ಆರಾಧಿಸಿ ಪ್ರಾರ್ಥಿಸಿಕೊಂಡಫಲವಾಗಿ ಪರಾಭವ ಸಂವತ್ಸರದಲ್ಲಿ ಕುಂಭಮಾಸ ಶುಕ್ಲಪಕ್ಷ ದ್ವಾದಶಿ, ಬೃಹಸ್ಪತಿವಾರ, ಪುನರ್ವಸು ನಕ್ಷತ್ರದ ದಿನ ಪುತ್ರೋತ್ಸವವಾಯಿತು. ಮಗನು ಕುಲಕ್ಕೇ ಅಪಾರ ಕೀರ್ತಿಗಳಿಸುತ್ತಾನೆಂದು ''ಕುಲಶೇಖರ'' ಎಂದು ನಾಮಕರಣ ಮಾಡಿದರು.

ಕುಲಶೇಖರನು ಶುಕ್ಲಪಕ್ಷ ಚಂದ್ರನಂತೆ ಬೆಳೆಯುತ್ತಾ ತಕ್ಕ ಕಾಲಗಳಲ್ಲಿ ಸಂಸ್ಕಾರಗಳನ್ನು ಹೊಂದಿ ವಿದ್ಯಾಭ್ಯಾಸ ಮಾಡಿದನು. ವೇದಶಾಸ್ತ್ರಾದಿಗಳಲ್ಲದೆ ಧನುರ್ವಿದ್ಯೆಯಲ್ಲೂ ಪಾರಂಗತನಾದುದ್ದನ್ನು ನೋಡಿ ರಾಜನು ಕುಲಶೇಖರನಿಗೆ ಯುವರಾಜ ಪಟ್ಟವನ್ನು ಕಟ್ಟಿದರು.

ಶ್ರೀ ಕುಲಶೇಖರನು ತನ್ನ ಸೈನ್ಯದ ಜತೆ ದಿಗ್ವಿಜಯಕ್ಕಾಗಿ ಪಾಂಡ್ಯ, ಚೋಳರಾಜರನ್ನು ಗೆದ್ದು ತಮಿಳುದೇಶವನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಮಗನ ಪರಾಕ್ರಮವನ್ನು ಮೆಚ್ಚಿ ರಾಜನು ಮಗನಿಗೆ ರಾಜ್ಯದ ಪಟ್ಟ ಕಟ್ಟಿ ವಾನಪ್ರಸ್ಥಾಶ್ರಮಕ್ಕೆ ತೆರಳಿದನು.

ಕುಲಶೇಖರರಿಗೆ ಭಾಗವತರೆಂದರೆ ಅಪಾರ ಗೌರವ. ಇವರು ಪರತತ್ತ್ವ ವಿಚಾರದಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ತನ್ನ ಹೆಚ್ಚು ಕಾಲವನ್ನು ಶ್ರೀಮದ್ರಾಮಾಯಣ ಕಾಲಕ್ಷೇಪದಲ್ಲೇ ಕಳೆಯುತ್ತಿದ್ದರು. ಇದರಿಂದಾಗಿ ಅವರು ಕುಲಶೇಖರಾಳ್ವಾರಾದರು. ಇದರಿಂದ ಬೇಸತ್ತ ಮಂತ್ರಿಗಳು ಇವರನ್ನು ರಾಜ್ಯಾಡಳಿತಕ್ಕೆ ಗಮನ ಕೊಡಬೇಕೆಂದು ಅವರ ಪೂಜಾ ವಿಗ್ರಹದ ನವರತ್ನ ಮಾಲೆಯನ್ನು ತೆಗೆದಿಟ್ಟು ಭಾಗವತರ ಮೇಲೆ ಕಳ್ಳತನದ ಆರೋಪ ಮಾಡಿದರು. ಕುಲಶೇಖರರು ಇದಕ್ಕೆ ಹೆದರದೆ ಒಂದು ಘಟಸರ್ಪವನ್ನು ಹಿಡಿಸಿ ತಂದು ಒಂದು ಮಡಿಕೆಯಲ್ಲಿ ಮುಚ್ಚಿಟ್ಟು ಮಂತ್ರಿಗಳನ್ನೆಲ್ಲಾ ಕರೆಸಿ ''ಭಾಗವತರೆಂದೂ ಈ ಕೃತ್ಯವನ್ನು ಮಾಡುವುದಿಲ್ಲ, ಹಾಗೇನಾದರೂ ಮಾಡಿದ್ದರೆ ಈ ಸರ್ಪವು ನನ್ನನ್ನು ಕಚ್ಚಲಿ ಎಂದು ಸರ್ಪವನ್ನು ಕೈಗೆ ತೆಗೆದು ಕೊರಳಿಗೆ

ಹಾಕಿಕೊಂಡರು. ಅದು ಅವರನ್ನು ಏನೂ ಮಾಡಲಿಲ್ಲ. ಮಂತ್ರಿಗಳು ಹೆದರಿ ಕ್ಷಮೆ ಯಾಚಿಸಿ ಹಾರವನ್ನು ಕುಲಶೇಖರರ ಮುಂದೆ ತಂದು ಇಟ್ಟರು. ಶ್ರೀಮಹಾವಿಷ್ಣುವಿನಲ್ಲಿ ಇವರಿಗಿದ್ದ ನಂಬಿಕೆ ವಿಶೇಷ ಭಕ್ತಿಯೇ ಇವರನ್ನು ಕಾಪಾಡಿದುದಕ್ಕೆ ಇದೇ ಸಾಕ್ಷಿ.

ಶ್ರೀ ಕುಲಶೇಖರರು ದಿವ್ಯ ಕ್ಷೇತ್ರಗಳ ಮಹಿಮೆಗಳನ್ನು ಕೇಳುತ್ತಿದ್ದಾಗ ಶ್ರೀರಂಗಕ್ಷೇತ್ರಕ್ಕೆ ಮನಸೋತು ಅಲ್ಲಿಗೆ ಯಾತ್ರೆಗಾಗಿ ಹೊರಡಲು ತೀರ್ಮಾನಿಸಿದರು. ಕ್ಷುಲ್ಲಕ ಕಾರಣಗಳನ್ನು ಹೇಳಿ ಮಂತ್ರಿಗಳು ಈ ಯಾತ್ರೆಯನ್ನು ಮುಂದೂಡುತ್ತಿದ್ದರು. ಮಂತ್ರಿಗಳ ಈ ಕೃತ್ಯಕ್ಕೆ ಬೇಸರಗೊಂಡು ವೈರಾಗ್ಯವನ್ನು ತಾಳಿ ರಾಜ್ಯವನ್ನು ತ್ಯಾಗಮಾಡಿ ರಂಗನಾಥನನ್ನು ದರ್ಶಿಸಲು ಮನಸ್ಸುಮಾಡಿ, ತಮ್ಮ ಮಗನಿಗೆ ಪಟ್ಟಾಭಿಷೇಕ ಮಾಡಿ ಶ್ರೀರಂಗಕ್ಕೆ ''ಘುಷ್ಯತೇ ಯಸ್ಯನಗರೇ ರಂಗಯಾತ್ರೇ ದಿನೇ ದಿನೇ'' ಎಂದು ಹೊರಟೇಬಿಟ್ಟರು. ಆಳ್ವಾರುಗಳ ಪೈಕಿ ದ್ರಾವಿಡಭಾಷೆಯಲ್ಲದೆ ಸಂಸ್ಕೃತದಲ್ಲಿ ಸ್ತೋತ್ರವನ್ನು ರಚಿಸಿರುವುದು ಇವರೊಬ್ಬರೇ. ಈ ಸ್ತೋತ್ರವಮಾಲೆಯೇ ಮುಕುಂದಮಾಲಾ. ಇದಲ್ಲದೆ ಕುಲಶೇಖರಾಳ್ವಾರರು ದ್ರಾವಿಡ ಭಾಷೆಯಲ್ಲಿ (ತಮಿಳಿನಲ್ಲಿ) ಅನುಗ್ರಹಿಸಿರುವ ಪೆರುಮಾಳ್ ತಿರುಮೊಳಿ ಎಂಬ 105 ಪಾಶುರಗಳು ನಾಲಾಯಿರ ದಿವ್ಯಪ್ರಬಂಧದಲ್ಲಿ ಸೇರಿದೆ. ಮನೆಗಳಲ್ಲಿ ಮತ್ತು ದೇವಾಲಯಗಳಲ್ಲಿ ಶ್ರೀರಾಮಪಟ್ಟಾಭಿಷೇಕ ಮಾಡುವಾಗ ಶ್ರೀವೈಷ್ಣವರು ಈ ಪಾಶುರಗಳನ್ನು ಪಾರಾಯಣ ಮಾಡಿ ಕೊನೆಯ ಎರಡು ಪಾಶುರಗಳನ್ನು ಶಾತ್ತುಮರ್ರೈಯಲ್ಲಿ ಹೇಳುವ ವಾಡಿಕೆ ಇದೆ.

ಶ್ರೀ ಕುಲಶೇಖರಾಳ್ವಾರ್‌ರವರ ದಿವ್ಯಪಾದಾರವಿಂದಗಳಿಗೆ

ಅನಂತಾನಂತ ವಂದನೆಗಳು

# Sree Kulasehkara Alwar

The King of Kozhikkode did not have children for a long time. He worshipped the God with special prayers for progeny. As a result a son was born in the year Parabhava, Kumbhamasa, Shuklapaksha Dwadashi on Thursday in Punarvasu star. The king christened him as Kulasekhara with the aim that he will bring glory to the royal family.

Kuasekhara completed his education along with the Dhanurudye which is a must for the family very brilliantly. The king was very happy at his son's progress and abdicated the throne in favour of his son Kulasekhara, performed his Pattabhisheka and left for the Vaanaprasthashrama.

Sri Kulasekhara had great respect for divine people 'Bhagavathas' and was deeply interested in spiritual studies, was spending more time in studying Sreemadramayana through lectures and hardly gave any time for kingdom's administration. Disgusted with this, his ministers tried to play a trick on him and kept the Navarathna Necklace of his deity away from him and complained that his visitors must have stolen. Kulasekhara did not get angry but ordered his men to bring a huge snake and kept it in a mud pot. He called his ministers and declared that if his visitors have stolen the Necklace let the serpent bite him and took out the serpent and put around his neck. The serpent did not harm him at all. The ministers got panicky and brought back the necklace and appologitically presented to Kulasekhara

He said his devotion to God has saved him and his divine visitors. After hearing the series of lectures on Divya Kshetras one day his mind focussed towards Srirangam the divine place of Sri Ramanatha. Again the ministers got agitated and came in his way of going to Sri Rangam. Undeterred by these gimmicks, he abdicated the throne in favour of his son, performed Pattabhishekha to him and left the kingdom towards Srirangam chanting **"Ghushyathe Yasyanagare Rangayaathra Dinay Dinay"** ..... and completed his work **"Mukundamala"** in Sanskrit. In addition to his Sanskrit work he wrote 105 stanzas of Perumaal Thirumozhy in Tamil which is included in the Naalaayira Divya Prabandha a collection of 4000 verses by 12 alwars. Sri Kulasekharalwar is the only one among them to write in **Sanskrit**. The last two stanzas of this Tamil work is included in the Shathumarai on occasions of 'Sri Rama Pattabhishekha' at homes as well as temples by Sreevaishnavas after reading the 105 verses of Perumal Thirumoli

***Prostrate at the divine feet of***
***Sri Kulasekharalwar***

# ಶ್ರೀಕೃಷ್ಣಾಷ್ಟಕಂ

ವಸುದೇವ ಸುತಂ ದೇವಂ ಕಂಸ ಚಾಣೂರ ಮರ್ದನಂ
ದೇವಕೀ ಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಂ ॥ 1

ಅತಸೀ ಪುಷ್ಪ ಸಂಕಾಶಂ ಹಾರನೂಪುರ ಶೋಭಿತಂ
ರತ್ನ ಕಂಕಣ ಕೇಯೂರಂ ಕೃಷ್ಣಂ ವಂದೇ ಜಗದ್ಗುರುಂ ॥ 2

ಕುಟಿಲಾಲಕ ಸಂಯುಕ್ತಂ ಪೂರ್ಣಚಂದ್ರಂ ನಿಭಾನನಂ
ವಿಲಸತ್ ಕುಂಡಲಧರಂ ಕೃಷ್ಣಂ ವಂದೇ ಜಗದ್ಗುರುಂ ॥ 3

ಮಂದಾರ ಗಂಧ ಸಂಯುಕ್ತಂ ಚಾರುಹಾಸಂ ಚತುರ್ಭುಜಂ
ಬರ್ಹಿಪಿಂಛಾಂಗ ಚೂಡಾಂಗಂ ಕೃಷ್ಣಂ ವಂದೇ ಜಗದ್ಗುರುಂ ॥ 4

ಉತ್ಫುಲ್ಲ ಪದ್ಮ ಪತ್ರಾಕ್ಷಂ ನೀಲಜೀಮೂತ ಸನ್ನಿಭಂ
ಯಾದವಾನಾಂ ಶಿರೋರತ್ನಂ ಕೃಷ್ಣಂ ವಂದೇ ಜಗದ್ಗುರುಂ ॥ 5

ರುಕ್ಮಿಣೀ ಕೇಳಿಸಂಯುಕ್ತಂ ಪೀತಾಂಬರ ಸುಶೋಭಿತಂ
ಅವಾಪ್ತ ತುಳಸೀ ಗಂಧಂ ಕೃಷ್ಣಂ ವಂದೇ ಜಗದ್ಗುರುಂ ॥ 6

ಗೋಪಿಕಾನಾಂ ಕುಚದ್ವಂದ್ವಂ ಕುಂಕುಮಾಂಕಿತ ವಕ್ಷಸಂ
ಶ್ರೀನಿಕೇತಂ ಮಹೇಶ್ವಾಸಂ ಕೃಷ್ಣಂ ವಂದೇ ಜಗದ್ಗುರುಂ ॥ 7

ಶ್ರೀವತ್ಸಾಂಕಂ ಮಹೋರಸ್ಕಂ ವನಮಾಲಾ ವಿರಾಜಿತಂ
ಶಂಖಚಕ್ರ ಧರಂ ದೇವಂ ಕೃಷ್ಣಂ ವಂದೇ ಜಗದ್ಗುರುಂ ॥ 8

ಕೃಷ್ಣಾಷ್ಟಕಮಿದಂ ಪುಣ್ಯಂ ಪ್ರಾತರುತ್ಥಾಯ ಯಃ ಪಠೇತ್
ಕೋಟಿಜನ್ಮ ಕೃತಂ ಪಾಪಂ ಸ್ಮರಣೇನ ವಿನಶ್ಯತಿ ॥ 9

# श्रीकृष्णाष्टकं

वसुदेव सुतं देवं कंस चाणूर मर्दनं
देवकी परमानंदं कृष्णं वंदे जगद्गुरुं।। १

अतसी पुष्प संकाशं हारनूपुर शोभितं
रत्नकंकण केयूरं कृष्णं वंदे जगद्गुरुं।। २

कुटिलालक संयुक्तं पूर्णचंद्रं निभाननं
विलसत् कुंडल धरं कृष्णं वंदे जगद्गुरुं।। ३

मंदार गंध संयुक्तं चारुहासं चजुर्भुजं ।
बर्हिपिंछाँग चू डांङ्गं कृष्णं वंदे जगद्गुरुं।। ४

उत्फुल्ल पद्म पत्राक्षं नील जीमूत सन्निभं ।
यादवानां शिरोरत्नं कृष्णं वंदे जगद्गुरुं।। ५

रुक्मिणी केळि संयुक्तं पीतांबर सुशोभितं ।
अवाप्त तुळसी गंधं कृष्णं वंदे जगद्गुरुं।। ६

गोपीकानां कुचद्वंद्वं कुंकुमांकित वक्षसं ।
श्रीनिकेतं महेश्वासं कृष्णं वंदे जगद्गुरुं।। ७

श्रीवत्सांकं महोरस्कं वनमाला विराजितं ।
शंङ्खचक्र धरं देवं कृष्णं वंदे जगद्गुरुं।। ८

कृष्णाष्टकमिदं पुण्यं प्रातरुत्थाय यः पठेत् ।
कोटिजन्मकृतं पापं स्मरणेन विनश्यति ।। ९

# Sree Krishnaashtakam

Vasudevasutham Devam Kamsa Chanura mardanam
Devakee paramanandam Krishnam Vande Jagadguram | 1

Athasee pushpa sankaasham Haaranupura Shobhitham
Rathna Kankana Keyuram Krishnam Vande Jagadguram | 2

Kutilaalaka Samyuktham Purnachandra nibhananam
Vilasthkundaladharam Krishnam Vande Jagadguram | 3

Mandaara Gandha Samyuktham Chaaruhaasam Chaturbhujam
Barhi pinchaanga chudaangam Krishnam Vande Jagadguram | 4

Uthphullapadma pathraaksham Neelajeemootha sannibham
Yaadavaanaam shirorathnam Krishnam Vande Jagadguram | 5

Rukminee keli samyuktham Peethambara sushobhitham
Avaaptha Thulasee gandham Krishnam Vande Jagadguram | 6

Gopikaanaam kucha dhvandvam kunkumaankitha vakshasam
Sreenikatham maheshwasam Krishnam Vande Jagadguram | 7

Srivathsaankam mahoraskam Vanamaala virajitham
Shankha Chakra dharam devam Krishnam Vande Jagadguram | 8

Krishnaasthtakamidam punyam pratharuthhaya yahpateth
Kotijanmakritham Paapam smaranena vinashyathi | 9

ಶ್ರೀ ಕುಲಶೇಖರ ಆಳ್ವಾರ್ ವಿರಚಿತ

# ಶ್ರೀ ಮುಕುಂದಮಾಲಾ

# श्री मुकुन्दमाला

# Sri Kulashekhara Alwar's Sri Mukunda Mala

ಘುಷ್ಯತೇ ಯಸ್ಯನಗರೇ ರಂಗಯಾತ್ರಾ ದಿನೇ ದಿನೇ ।
ತಮಹಂ ಶಿರಸಾವಂದೇ ರಾಜಾನಂ ಕುಲಶೇಖರಮ್ ॥

ಕುಲಶೇಖರರು ಇರುವ ದಿವ್ಯ ನಗರವು ಬಹಳ ಪವಿತ್ರವಾದುದು ಆ ದಿವ್ಯನಗರದಲ್ಲಿ ಶ್ರೀ ರಂಗಕ್ಷೇತ್ರದ ಯಾತ್ರೆಯು ಪ್ರತಿನಿತ್ಯವೂ ಘೋಷಿಸಲ್ಪಡುತ್ತವೆ. ಇಂತಹ ರಾಜ ಕುಲಶೇಖರರಿಗೆ ನಾನು ತಲೆಬಾಗಿ ವಂದಿಸುತ್ತೇನೆ.

घुष्यते यस्यनगरे रंगयात्रा दिने दिने ।
तमहं शिरसावंदे राजानं कुलशेखरं ॥

**Ghushyathe yasya nagare Rangayathra dinay dinay**
**Tamaham Shirasavande Rajanum Kulshekharam ||**

We prostrate to Raja Kulasekhara even as daily rituals go on in Sri Rangam.

ಶ್ರೀವಲ್ಲಭೇತಿ ವರದೇತಿ ದಯಾಪರೇತಿ
ಭಕ್ತಪ್ರಿಯೇತಿ ಭವಲುಂಠನಕೋವಿದೇತಿ
ನಾಥೇತಿ ನಾಗಶಯನೇತಿ ಜಗನ್ನಿವಾಸೇತಿ
ಆಲಾಪನಂ ಪ್ರತಿಪದಂ ಕುರು ಮೇ ಮುಕುಂದ ॥ ॥1॥

ಹೇ ಮುಕುಂದ ! ನೀನು ನಂಬಿದ ಭಕ್ತಜನರ ಇಷ್ಟಾರ್ಥಗಳನ್ನು ನೆರವೇರಿಸುವ ನಿಧಿಯಂತಿರುವೆ. ನಿನ್ನ ನಾಮಸ್ಮರಣೆಯನ್ನು ಸದಾ ದಯಪಾಲಿಸುವೆ. ನೀನೇ ಭಕ್ತಪ್ರಿಯ, ಸಂಸಾರ ದುಃಖವನ್ನು ನಾಶಪಡಿಸುವ ಜಗನ್ನಾಥನಾಗಿರುವೆ. ಹೇ ಶೇಷಶಯನ, ಮೋಕ್ಷಪ್ರದನಾದ ಮುಕುಂದ ! ಸದಾ ನಿನ್ನ ಸ್ಮರಣೆ ನನಗಿರಲಿ.

श्रीवल्लभेति वरदेति दयापरेति
भक्तप्रियेति भवलुण्ठनकोविदेति ।
नाथेति नागशयनेति जगन्निवासेति
आलापनं कुरु मे मुकुन्द ॥ ॥१॥

**Sri Vallabhethi Varadethi Dayaparethi**
**Bhakthapriyethi Bhavaluntanakovidethi**
**Nathethi Nagashayanethi Jagannaivasethi**
**Alapanam prathipadam kuru may Mukunda** ||1||

Oh Mukunda, the all merciful Varada Vallabha, the Lord sleeping on Adisesha I worship you each day.

ಜಯತು ಜಯತು ದೇವೋ ದೇವಕೀನಂದನೋಽಯಂ
ಜಯತು ಜಯತು ಕೃಷ್ಣೋ ವೃಷ್ಣಿವಂಶಪ್ರದೀಪಃ ।
ಜಯತು ಜಯತು ಮೇಘಶ್ಯಾಮಲಃ ಕೋಮಲಾಂಗೋ
ಜಯತು ಜಯತು ಪೃಥ್ವೀ ಭಾರನಾಶೋ ಮುಕುಂದಃ ॥ ॥2॥

ದೇವಾಧಿದೇವನಾದ ಶ್ರೀಮನ್ನಾರಾಯಣನಿಗೆ ಜಯವಾಗಲಿ. ದೇವಕೀನಂದನನಾದ ಶ್ರೀಕೃಷ್ಣನೂ ಆತನೇ. ವೃಷ್ಣಿಕುಲಕ್ಕೆ ಭೂಷಣನಾದ ಕೃಷ್ಣ! ನಿನಗೆ ಜಯ. ನೀಲಮೇಘ ಶ್ಯಾಮನೂ, ಕೋಮಲಾಂಗನೂ ಆದ ಶ್ರೀಹರಿಗೆ ಜಯವಾಗಲಿ. ಭೂಭಾರವನ್ನೇನಾಶಮಾಡಿದ ಮುಕುಂದನಿಗೆ ಜಯವಾಗಲಿ.

जयतु जयतु देवो देवकीनन्दनोऽयं
जयतु जयतु कृष्णो वृष्णिवंशप्रदीपः ।
जयतु जयतु मेघश्यामलः कोमलाङ्गो
जयतु जयतु पृथ्विभारनाशो मुकुन्दः॥ ॥२॥

**Jayathu Jayatho Devo Devakeenanandanoyam**
**Jayathu jayathu Krishno Vrishnivamsha pradeepaha**
**Jayathu Jayathu Meghashyamalah Komalango**
**Jayathu Jayathu prithvee bharanasho Mukundaha** ||2||

Victory to the son of Devaki, the leading light of Vrishni parivar, to the beautiful cloud coloured Lord the destroyer of sorrows Sri Mukunda.

ಮುಕುಂದ ! ಮೂರ್ಧ್ನಾ ಪ್ರಣಿಪತ್ಯ ಯಾಚೇ
ಭವಂತಮೇಕಾಂತಮಿಯಂತಮರ್ಥಮ್ ।
ಅವಿಸ್ಮೃತಿಃತ್ವಚ್ಚರಣಾರವಿಂದೇ
ಭವೇ ಭವೇ ಮೇಽಸ್ತು ಭವತ್ ಪ್ರಸಾದಾತ್ ॥ ॥3॥

ಹೇ ಮುಕುಂದ ! ನಾನು ತಲೆಬಾಗಿ ವಿನಯಪೂರ್ವಕವಾಗಿ ನಿನ್ನನ್ನು ಕೇಳುವುದೇನೆಂದರೆ ಜನ್ಮ ಜನ್ಮಾಂತರದಲ್ಲೂ ನಿನ್ನ ಪಾದಾರವಿಂದಗಳಲ್ಲಿ ನನಗೆ ಏಕಾಂತ ಭಕ್ತಿ ಮತ್ತು ನಿನ್ನ ಅನುಗ್ರಹ ಸದಾ ನನಗಿರಲೆಂದಷ್ಟೇ.

मुकुन्द मूर्ध्रा प्रणिपत्य याचे
भवन्त-मेकान्त-मियन्त-मर्थम् ।
अविस्मृतिस्त्वच्चरणारविन्दे
भवे भवे मेऽस्तु भवत्प्रसादात् ॥ ॥३॥

**Mukunda moordhna pranipathya yachey**
**Bhavanthamekantha miyanthamarthham**
**Avismrithisthvath charanaravinday**
**Bhavay bhavay mesthu bhavath prasaadath** ||3||

I bow to touch the feet of Mukunda for life everlasting with thy blessings. Let me always remember your Holy presence.

ನಾಹಂ ವಂದೇ ತವಚರಣಯೋಃ ದ್ವಂದ್ವಮದ್ವಂದ್ವಹೇತೋಃ
ಕುಂಭೀಪಾಕಂ ಗುರುಮಪಿ ಹರೇ ನಾರಕಂ ನಾಪನೇತುಮ್ ।
ರಮ್ಯಾರಾಮಾಮೃದುತನುಲತಾ ನಂದನೇ ನಾಪಿ ರಂತು
ಭಾವೇ ಭಾವೇ ಹೃದಯಭವನೇ ಭಾವಯೇಯಂ ಭವಂತಮ್ ॥ ॥4॥

ಹೇ ಶ್ರೀಹರಿ ! ನಾನು ಸುಖದುಃಖ, ಜಯ-ಅಪಜಯಗಳ ಕಾರಣದಿಂದಷ್ಟೇ ನಿನ್ನ ಚರಣಗಳನ್ನು ವಂದಿಸಲಾರೆ. ಕುಂಭೀಪಾಕ ಮುಂತಾದ ಘೋರ ನರಕದಿಂದ ಪಾರುಮಾಡೆಂದು ವಂದಿಸುವುದಿಲ್ಲ, ಇಂದ್ರಲೋಕದ ನಂದನವನದಲ್ಲಿ ಸುಂದರಿಯರ ಸಂಗ ಬಯಸಿ ಸ್ವರ್ಗಸುಖಕ್ಕಾಗಿ ವಂದಿಸಲಾರೆ. ಆದರೆ ನನ್ನ ಹೃದಯವೆಂಬ ಅರಮನೆಯಲ್ಲಿ ಸದಾ ನಿನ್ನ ದಿವ್ಯ ಸನ್ನಿಧಾನವಿರಲಿ ಎಂದಷ್ಟೇ ಪ್ರಾರ್ಥಿಸುತ್ತೇನೆ.

नाहं वन्दे तव चरणयोः द्वन्द्वमद्वन्द्वहेतोः
कुम्भीपाकं गुरुमपि हरे नारकं नापनेतुम् ।
रम्या रामा मृदुतनुलता नन्दने नापि रन्तुं
भावे भावे हृदयभवने भावयेयं भवन्तम् ॥ ॥४॥

**Naham vande thava charanayoh dvandva madvanda hetho**
**Kumbheepakam Gurumapi harey narakam napanethum**
**Ramya raama mriduthanalatha nandany naapiranthum**
**Bhavay bhavay hridayabhavanay bhavayeyam bhavantham** ||4||

Oh Hari I worship you not for help for releasing joys and sorrows, not for escaping the sorrows of hell, not for pleasure of heavenly maids but only for everlasting presence of you in my heart.

ನಾಸ್ಥಾಧರ್ಮೇ ನ ವಸುನಿಚಯೇ ನೈವಕಾಮೋಪಭೋಗೇ
ಯದ್ಯದ್ ಭವ್ಯಂ ಭವತು ಭಗವನ್ ಪೂರ್ವಕರ್ಮಾನುರೂಪಮ್ ।
ಏತತ್ ಪ್ರಾರ್ಥ್ಯಂ ಮಮ ಬಹುಮತಂ ಜನ್ಮಜನ್ಮಾಂತರೇಽಪಿ
ತ್ವತ್ ಪಾದಾಂಭೋರುಹ ಯುಗಗತಾ ನಿಶ್ಚಲಾ ಭಕ್ತಿರಸ್ತು ॥ ॥5॥

ಹೇ ಭಗವಂತ ! ನನಗೆ ಕೇವಲ ಧರ್ಮದಲ್ಲಾಗಲಿ, ಪ್ರಾಪಂಚಿಕ ಸುಖ ಭೋಗವಸ್ತುಗಳ ಸಂಗ್ರಹದಲ್ಲಾಗಲಿ, ಸುಖವನ್ನು ಅನುಭವಿಸುದರಲ್ಲಾಗಲಿ ಆಸಕ್ತಿಯಿಲ್ಲ, ವ್ಯಾಮೋಹವಿಲ್ಲ. ನನ್ನ ಕರ್ಮಾನುಸಾರವಾಗಿ ಏನಾಗುವುದೋ ಆಗಿಹೋಗಲಿ. ನಿನ್ನ ಪಾದಗಳಲ್ಲಿ ನನಗೆ ಜನ್ಮಜನ್ಮಾಂತರದಲ್ಲೂ ನಿಶ್ಚಲವಾದ ಭಕ್ತಿ ಇರಲಿ ಎಂಬುದೇ ನನ್ನ ಪ್ರಾರ್ಥನೆಯಾಗಿದೆ.

नास्था धर्मे न वसुनिचये नैव कामोपभोगे
यद्यद् भव्यं भवतु भगवन् पूर्वकर्मानुरूपम् ।
एतत् प्रार्थ्यं मभ बहुमतं जन्मजन्मान्तरेऽपि
त्वत्पादांभोरुह युगतता निश्चला भक्तिरस्तु ।। ।।५।।

**Nastha dharmay na vasunithay naiva kamopa bhoge**
**Yadyath bhavyam bhavathu Bhagavan poorvakarmanu roopam**
**Yethath prarthyam mama bahumatham janmajanmantharepi**
**Thvathpaadaambhoruha yugagatha nischala bhakthirasthu ||5||**

I have no desire for power, riches, sensuous things of life but to fulfil whatever I have done to my previous actions. I am always to pray for everlasting life with true Bhakthi in you.

ದಿವಿ ವಾ ಭುವಿ ವಾ ಮಮಾಸ್ತು ವಾಸೋ
ನರಕೇ ವಾ ನರಕಾಂತಕ ! ಪ್ರಕಾಮಮ್ ।
ಅವಧೀರಿತ ಶಾರದಾರವಿಂದೌ
ಚರಣೌ ತೇ ಮರಣೇಽಪಿ ಚಿಂತಯಾಮಿ ॥ ॥6॥

ಹೇ ನರಕಾಂತಕನಾದ ಶ್ರೀಕೃಷ್ಣ ! ನಾನು ಭೂಮಿಯಲ್ಲಿರಲಿ, ಸ್ವರ್ಗ ಅಥವಾ ನರಕಕ್ಕೆ ಹೋಗಲಿ. ಶರತ್‌ಕಾಲದ ನಳನಳಿಸುವ ತಾವರೆಯ ಕಾಂತಿಯನ್ನು ಧಿಕ್ಕರಿಸುವ ನಿನ್ನ ಚರಣಾರವಿಂದಗಳನ್ನು ಮರಣ ಕಾಲದಲ್ಲೂ ಧ್ಯಾನಿಸುತ್ತೇನೆ.

दिवि वा भुवि वा ममास्तु वासो
नरके वा नरकान्तक ! प्रकामम् ।
अवधीरित-शारदारविन्दौ चरणौ
ते मरणेऽपि चिन्तयामि ॥ ॥६॥

**Divi vaa Bhuvi vaa mamasthuvaso**
**Narake vaa narakanthaka prakaamam**
**Avadheeratha shaaradaravindou**
**Charanou thay maranepi chinthayami** **||6||**

The destroyer of Narakasura, whether I be in heaven or hell, with your warm help let me be with you till my death.

ಕೃಷ್ಣ ! ತ್ವದೀಯ ಪದಪಂಕಜಪಂಜರಾಂತಃ
ಅಧ್ಯೈವಮೇ ವಿಶತು ಮಾನಸರಾಜಹಂಸಃ ।
ಪ್ರಾಣಪ್ರಯಾಣ ಸಮಯೇ ಕಫವಾತಪಿತ್ತೈಃ
ಕಂಠಾವರೋಧನ ವಿಧೌ ಸ್ಮರಣಂ ಕುತಸ್ತೇ ॥ ॥7॥

ಹೇ ಕೃಷ್ಣ ! ನಿನ್ನ ಪಾದಪದ್ಮವೆಂಬ ಪಂಜರದೊಳಗೆ ನನ್ನ ಮನಸ್ಸೆಂಬ ಹಂಸವು ಈಗಲೇ ಪ್ರವೇಶಿಸಲಿ. ಏಕೆಂದರೆ ಸಾವಿನ ಸಮಯದಲ್ಲಿ ಶರೀರವು ಕಫ, ವಾತ, ಪಿತ್ತವಿಕಾರಗಳಿಂದ ಬಾಯಿ ಕಟ್ಟಿಹೋಗುತ್ತದೆ. ಆಗ ನಿನ್ನ ಸ್ಮರಣೆ ಹೇಗೆ ಸಾಧ್ಯ ?

कृष्ण त्वदीय-पदपङ्कज-पञ्जरान्तं
अद्यैव मे विशतु मानस-राजहंसः ।
प्राणप्रयाणसमये कफवातपित्तैः
कण्ठावरोधन-विधौ स्मरणं कुतस्ते ॥ ॥७॥

**Krishnathwadeeya padapankaja panjarantham**
**Adhyaiva may vishathu manasa rajahamsaha**
**Pranaprayanasamaye Kapha vatha pitthaihi**
**Kanthavarodhana vidhou smaranam kuthasthe** ||7||

Oh Krishna let me be at your feet or be caught in your cage where the bird of my spirit is entrapped. When my body faculties decline and death approaches, how can I think of you at that time.

ಚಿಂತಯಾಮಿ ಹರಿಮೇವ ಸಂತತಂ
ಮಂದಮಂದಹಸಿತಾನನಾಂಬುಜಮ್ ।
ನಂದಗೋಪತನಯಂ ಪರಾತ್ಪರಂ
ನಾರದಾದಿಮುನಿಬೃಂದವಂದಿತಮ್ ॥ ॥8॥

ಮಂದಹಾಸದಿಂದ ಕೂಡಿದ ಶ್ರೀಕೃಷ್ಣನ ಮುಖಾರವಿಂದವನ್ನೇ ಧ್ಯಾನಿಸುತ್ತೇನೆ. ಪರಮಾತ್ಮನಾದ ಆ ನಂದಗೋಪಕುಮಾರನು, ನಾರದಾದಿ ಋಷಿ ಯೋಗಿಗಳಿಂದ ಆರಾಧಿಸಲ್ಪಟ್ಟವನಾದ ಶ್ರೀಹರಿಯನ್ನೇ ಸದಾಕಾಲ ಸ್ಮರಿಸುತ್ತೇನೆ.

चिन्तयामि हरिमेव सन्ततं
मन्दमन्द-हसिताननाम्बुजम् ।
नन्दगोप-तनयं परात्परं
नारदादि-मुनिबृन्द-वन्दितम् ॥ ॥८॥

**Chinthayami harimeva santhatham**
**Mandamanda hasithana nambhujam**
**Nandagopa thanayam parathparam**
**Naradadi munivrunda vanditham** **||8||**

With gay abandon I meditate on the ever smiling face of Nandagopa's son whom even Narada Maharshi himself worshipped.

ಕರಚರಣಸರೋಜೇ ಕಾಂತಿಮನ್ನೇತ್ರಮೀನೇ
ಶ್ರಮಮುಷಿ ಭುಜವೀಚಿ ವ್ಯಾಕುಲೇಽಗಾಧಮಾರ್ಗೇ ।
ಹರಿಸರಸಿ ವಿಗಾಹ್ಯಾಪೀಯ ತೇಜೋಜಲೌಘಂ
ಭವಮರು ಪರಿಖಿನ್ನಃ ಖೇದಮದ್ಯ ತ್ಯಜಾಮಿ ॥ ॥9॥

ಸಂಸಾರವೆಂಬ ಮರುಭೂಮಿಯಲ್ಲಿ ಬಸವಳಿದ ನಾನು ಶ್ರೀಹರಿಯ ಕರ-ಚರಣಗಳೆಂಬ ತಾವರೆಗಳು, ದಿವ್ಯಕಾಂತಿಯುಕ್ತವಾದ ಕಣ್ಣುಗಳೆಂಬ ಮೀನುಗಳು, ಆತನ ಬಾಹುಗಳೆಂಬ ಅಲೆಗಳುಳ್ಳ ಶ್ರೀಹರಿ ಸರೋವರದಲ್ಲಿ ಮಿಂದು, ಆತನ ತೇಜಸ್ಸೆಂಬ ಅಮೃತ ಸದೃಶವಾದ ನೀರನ್ನು ತೃಪ್ತಿಯಾಗುವಂತೆ ಕುಡಿದು ನನ್ನ ದುಃಖಗಳನ್ನು ಪೂರ್ತಿಯಾಗಿ ಮರೆಯುತ್ತೇನೆ.

करचरणसरोजे कान्तिमन्नेत्रमीने
श्रममुषि भुजवीचिव्याकुलेऽगाधमार्गे ।
हरिसरसि विगाह्यापीय तेजोजलौघं
भवमरुपरिखिन्नः खेदमद्य त्यजामि ॥ ॥९॥

**Karacharanasaroje Kanthimannethrameenay**
**Shramamushi bhujaveechivyakule ghada marge**
**Harisarasi vigahyapeeya thojojalougham**
**Bhavamaru parikhinnah kheda madya thyajami** ||9||

Wary of being on the dead sands of family attachment, I would like to sink in the ocean of mercy to drink its waters and seek relief from worldly sorrows.

ಸರಸಿಜನಯನೇ ಸಶಂಖಚಕ್ರೇ
ಮುರಭಿದಿ ಮಾ ವಿರಮಸ್ವಚಿತ್ತ ! ರಂತುಮ್ ।
ಸುಖತರಮಪರಂ ನ ಜಾತು ಜಾನೇ
ಹರಿಚರಣಸ್ಮರಣಾಽಮೃತೇನ ತುಲ್ಯಮ್ ॥ ॥10॥

ಹೇ ಮನಸೇ ! ಕಮಲದಂತೆ ಕಣ್ಣುಗಳುಳ್ಳ ಶಂಖ-ಚಕ್ರಧಾರಿಯಾದ ಮುರಹರನಾದ ನಾರಾಯಣನಲ್ಲಿ ರಮಿಸಲು ಮರೆಯಬೇಡ. ಶ್ರೀಹರಿಯ ಪಾದಗಳ ಸ್ಮರಣೆ ಎಂಬ ಅಮೃತಕ್ಕೆ ಸಮಾನವಾದುದನ್ನೇನೂ ನಾನು ತಿಳಿಯಲಾರೆ.

**सरसिजनयने सशङ्खचक्रे**
**मुरभिदि मा वरमस्व चित्त ! रन्तुम् ।**
**सुखतरमपरं न जातु जाने**
**हरिचरणस्मरणाऽमृतेन तुल्यम् ॥ ॥१०॥**

**Sarasija nayanay sashankhachakray**
**Murabhidi maa viramaswachitharanthum**
**Sukhatharamaparam na jathu janay**
**Haricharanasmaranaamruthena thulyam ||10||**

Let my sense constantly be fixed on you, the lotus eyed one with Shankha and Chakra, the enemy of Mura. I do not know anything but imbibing the nectar of the worship of Lord.

ಮಾಭೀರ್ಮಂದಮನೋ ವಿಚಿಂತ್ಯ ಬಹುಧಾ ಯಾಮೀಶ್ಚಿರಂ ಯಾತನಾಃ
ನಾಮೀ ನಃ ಪ್ರಭವಂತಿ ಪಾಪರಿಪವಃ, ಸ್ವಾಮೀ ನನು ಶ್ರೀಧರಃ ।
ಆಲಸ್ಯಂ ವ್ಯಪನೀಯ ಭಕ್ತಿಸುಲಭಂ ಧ್ಯಾಯಸ್ವನಾರಾಯಣಂ
ಲೋಕಸ್ಯ ವ್ಯಸನಾಪನೋದನಕರೋ ದಾಸಸ್ಯ ಕಿಂ ನ ಕ್ಷಮಃ ॥ ॥11॥

ಹೇ ಮೂಢಮನಸೇ ! ನಾನಾಬಗೆಯ ಯಮಲೋಕದ ಯಾತನೆಗಳನ್ನೇ ನೆನೆಯುತ್ತಾ ಭಯಪಡಬೇಡ. ಶ್ರೀಹರಿಯೇ ಸ್ವಾಮಿ ಎಂದು ದೃಢವಾಗಿ ನಂಬಿದವರಿಗೆ ಈ ಪಾಪಗಳೆಂಬ ಶತೃಗಳು ಏನೂ ಮಾಡಲಾರವು. ಒಡೆಯನ ನೆನೆದವರಿಗೇಕೆ ಈ ಗೊಡವೆ ?

माभीर्मन्दमनो विचिन्त्य बहुधा यामीश्चिरं यातनाः
नामी नः प्रभवन्ति पापरिपवः स्वामी ननु श्रीधरः ।
आलस्यं व्यापनीय भक्तिसुलभं ध्यायस्व नारायणं
लोकस्य व्यसनापनोदनकरो दासस्य किं न क्षमः ॥ ॥११॥

**Maabheeramanda manovichinthya buhudha yameeschiram yathanah**
**Namee Nah prabhavanthi paaparipavah: swamy nanu Sreedharah:**
**Aalasyam vyapaneeya bhakthisulabham dhyayassva Nnaaraayanam**
**Lokasya vyasanaapanodanakaro dasasya kim na kshamaha ||11||**

The remission of sins of ignorant one is entirely in your hands. Think of Sridhara your God with Bhakthi. He always assists his worshipper.

ಭವಜಲಧಿಗತಾನಾಂ ದ್ವಂದ್ವವಾತಾಹತಾನಾಂ
ಸುತದುಹಿತೃಕಲತ್ರತ್ರಾಣಭಾರಾರ್ದಿತಾನಾಮ್ ।
ವಿಷಮವಿಷಯತೋಯೋ ಮಜ್ಜತಾಮಪ್ಲವಾನಾಂ
ಭವತು ಶರಣಮೇಕೋ ವಿಷ್ಣುಪೋತೋ ನರಾಣಾಮ್ ॥ ॥12॥

ಸಂಸಾರ ಸಾಗರದಲ್ಲಿ ಮುಳುಗಿ, ನಾನಾ ಬಗೆಯ ಮಾನಸಿಕ ಯಾತನೆಗಳೆಂಬ ಬಿರುಗಾಳಿ ಹೊಡೆತಕ್ಕೆ ಸಿಲುಕಿ, ಹೆಂಡತಿ-ಮಕ್ಕಳು-ಬಂಧು ಬಳಗವೆಂಬ ವ್ಯಾಮೋಹ ಭಾರದಿಂದ ನಲುಗಿದವರಿಗೆ ವಿಷಯ ಸುಖಗಳೆಂಬ ನೀರಿನಲ್ಲಿ ಮುಳುಗಿ ದಾಟಲಾಗದೆ ಬಳಲುವವರಿಗೆ ವಿಷ್ಣುವೆಂಬ ದೋಣಿಯೊಂದೇ ಆಶ್ರಯವಾಗಲಿ.

भवजलधिगतानां द्वंद्ववाताहतानां
सुतदुहितृकळत्र-त्राणभारार्दितानाम् ।
विषमविषयतोयो मज्जतामप्लवानां
भवतु शरणमेको विष्णुपोतो नराणाम् ॥ ॥१२॥

**Bhavajaladhi gathaanaam dwandwa vaathaahathaanaam**
**Suthaduhithrukalathra thraana bharardithaanaam**
**Vishama vishaya thoyo majjathamaplavaanaam**
**Bhavathu sharanameko Vishnupotho naraanaam** **||12||**

The family is sunk with problems of joy and sorrow in the midst of worldly matters. To be free from this worship Vishnu with devotion.

ಭವಜಲಧಿಮಗಾಧಂ ದುಸ್ತರಂ ನಿಸ್ತರೇಯಂ
ಕಥಮಹಮಿತಿ ಚೇತೋ ಮಾ ಸ್ಮಗಾಃ ಕಾತರತ್ವಂ ।
ಸರಸಿಜದೃಶಿ ದೇವೇ ತಾವಕೀ ಭಕ್ತಿರೇಕಾ
ನರಕಭಿದಿ ನಿಷಣ್ಣಾ ತಾರಯಿಷ್ಯತ್ಯವಶ್ಯಮ್ ॥ ॥13॥

ಹೇ ಮನಸೇ ! ನಾನು ಅಗಾಧವಾದ ಈ ಸಂಸಾರ ಸಾಗರವನ್ನು ದಾಟುವುದು ಹೇಗೆಂಬ ಆತಂಕ ನಿನಗೆ ಬೇಡ. ಕಮಲಾಕ್ಷನಾದ ನರಕದಿಂದ ಪಾರು ಮಾಡುವ ಆ ಭಗವಂತನಲ್ಲಿ ಅಚಲವಾದ ನಿನ್ನ ಭಕ್ತಿಯೊಂದೇ ಖಂಡಿತವಾಗಿ ಸಲಹಬಲ್ಲದು, ಸಂಶಯಬೇಡ.

भवजलधिमगाधं दुस्तरं निस्तरेयं
कथमहमिति चेतो मा स्म गाः कातरत्वम्
सरसिजदृशि देवे तावकी भक्तिरेका
नरकभिदि निषण्णा तारयिष्यत्यवश्यम्॥ ॥१३॥

**Bhavajaladhimaghaadham dustharam nisthareyam**
**Kathamahamithi chetho maasmagah kaatharathvam**
**Sarasijadrishi deve thaavakee bhakthirekhaa**
**Narakabhidi nishnna thaarayishyathya vashyam** ||13||

The worship of the lotus eyed Lord, killer of Narakasura, will help you to cross the deep revine of worldly life.

ತೃಷ್ಣಾತೋಯೇ ಮದನಪವನೋದ್ಧೂತ ಮೋಹೋರ್ಮಿಮಾಲೇ
ದಾರಾऽऽವರ್ತೇ ತನಯ ಸಹಜ ಗ್ರಾಹಸಂಘಾಕುಲೇ ಚ ।
ಸಂಸಾರಾಖ್ಯೇ ಮಹತಿ ಜಲಧೌಮಜ್ಜತಾಂ ನಸ್ತ್ರಿಧಾಮನ್ !
ಪಾದಾಂಭೋಜೇ ವರದ ಭವತೋ ಭಕ್ತಿನಾಮಂ ಪ್ರಯಚ್ಛ ॥ ॥14॥

ಆಸೆಗಳೆಂಬ ಅಪಾರ ಜಲರಾಶಿ, ಕಾಮನೆಗಳೆಂಬ ಬಿರುಗಾಳಿಯಿಂದ ಎದ್ದ ಅಲೆಗಳು, ಹೆಂಡತಿ ಎಂಬ ಸುಳಿ, ಮಕ್ಕಳು, ಸೋದರರೆಂಬ ಮೊಸಳೆಗಳುಳ್ಳ ಸಂಸಾರವೆಂಬ ಮಹಾಸಾಗರದಲ್ಲಿ ಮುಳುಗುತ್ತಿರುವ ನಮ್ಮನ್ನು ಹೇ ತ್ರಿವಿಕ್ರಮ ! ವರದ ! ನಿನ್ನ ಪಾದಕಮಲಗಳಲ್ಲಿ ಭಕ್ತಿ ಎಂಬುದನ್ನು ದಯಪಾಲಿಸು.

तृष्णातोये मदनपवनोद्धूतमोहोर्मिमाले
दारावर्ते तनयसहजग्राहसंघाकुले च ।
संसाराख्ये महति जलधौ मज्जतां नास्त्रिधामन् ।
पादाम्भोजे वरद भवतो भक्तिनावं प्रयच्छ ॥ ॥१४॥

**Thrishnaathoye madanapavanoddhutha mohormimaalay**
**Daaraavarthay thanyasahajagraha sanghakulay cha**
**Samsaaraakhye mahathi jaladhou majjathaam nasthridhaman**
**Paadambhojay varada bhavatho bhakthinaamam prayachcha ||14||**

Oh, fulfiller of wishes, the Lord of three worlds please steer clear crocodiles in the ocean in the ship of Family through my Bhakthi to you.

ಮಾ ದ್ರಾಕ್ಷಂ ಕ್ಷೀಣಪುಣ್ಯಾನ್ ಕ್ಷಣಮಪಿ ಭವತೋ ಭಕ್ತಿಹೀನಾನ್ ಪದಾಬ್ಜೇ
ಮಾ ಶ್ರೌಷಂ ಶ್ರಾವ್ಯಬದ್ಧಂ ತವ ಚರಿತಮಪಾಸ್ಯಾ ಅನ್ಯದಾಖ್ಯಾನಜಾತಮ್ ।
ಮಾ ಸ್ಮಾರ್ಷಂ ಮಾಧವ ! ತ್ವಾಮಪಿ ಭುವನಪತೇ ! ಚೇತಸಾಽಪಹ್ನುವಾನಾನ್
ಮಾ ಭೂವಂ ತ್ವತ್ ಸಪರ್ಯಾವ್ಯತಿಕರರಹಿತೋ ಜನ್ಮಜನ್ಮಾಂತರೇ ಪಿ ॥ ॥15॥

ಹೇ ಮಾಧವ ! ನಾನು ಭಕ್ತಿಹೀನರನ್ನು ನೋಡುವುದೇ ಬೇಡ, ನಿನ್ನ ಮಹಿಮಾನ್ವಿತ ಕಥೆಗಳ ಹೊರತು ಬೇರೆ ಪ್ರಸಂಗ ನಾನು ಕೇಳುವುದೇ ಬೇಡ. ಮನದಲ್ಲಿ ನಿನ್ನನ್ನು ನೆನೆಯದವರ ಸ್ಮರಣೆಯೂ ಬೇಡ. ಜನ್ಮ ಜನ್ಮಾಂತರದಲ್ಲೂ ನಿನ್ನ ನಾಮಸ್ಮರಣೆ-ಸೇವೆಯಿಲ್ಲದ ಪರಿಸ್ಥಿತಿ ಒದಗುವುದೇ ಬೇಡ.

माद्राक्षं क्षीणपुण्यान् क्षणमपि भवतो भक्तिहीनान् पदाब्जे
माश्रौषं श्राव्यबद्धं तव चरितमपास्याऽन्यदाख्यानजातम् ।
मास्मार्ष माधव त्वामपि भुवनपते चेतसाऽपह्नुवानान्
माभूवं त्वत्सपर्या-व्यतिकर-रहितो जन्मजन्मान्तरेऽपि ॥ ॥१५॥

**Maa dhaarksham ksheenapunyaan kshanamapi bhavatho**
**bhakthineenaan padaabje**
**Maa shrousham shraavyabaddham thavacharithamapaasya**
**anyadaakhyaana jaatham**
**Maa smaarsham maadhava ! Thwaamapi Bhuvanapathe**
**chethasaapahnuvaahaan**
**Maa Bhoovam Thwathsaparyaa vyathi kara rahitho**
**janma janmaantharepi** **॥15॥**

I do not desire to see who deny you, I do not wish to hear any unpleasantness of your presence. Never allow me to believe any truth other than your presence. In everlasting life I will never come to believe that I am not able to serve you.

ಜಿಹ್ವೇ ! ಕೀರ್ತಯ ಕೇಶವಂ ಮುರರಿಪುಂ ಚೇತೋ ಭಜ ಶ್ರೀಧರಂ
ಪಾಣಿದ್ವಂದ್ವ ! ಸಮರ್ಚಯಾಚ್ಯುತ ಕಥಾಃ ಶ್ರೋತ್ರದ್ವಯ ! ತ್ವಂ ಶೃಣು ।
ಕೃಷ್ಣಂ ಲೋಕಯ ಲೋಚನದ್ವಯ ಹರೇಃ ಗಚ್ಛಾಂಘ್ರಿ ಯುಗ್ಮಾಲಯಂ
ಜಿಘ್ರಘ್ರಾಣ ! ಮುಕುಂದಪಾದತುಲಸೀಂ ಮೂರ್ಧನ್ ! ನಮಾಧೋಕ್ಷಜಮ್ ॥ ॥16॥

ಹೇ ನಾಲಗೆಯೇ ! ಕೇಶವನ ನಾಮೋಚ್ಚಾರ ಮಾಡು, ಹೇ ಮನವೇ ! ಮುರಾರಿಯಾದ ಶ್ರೀಧರನನ್ನು ಸ್ಮರಿಸು. ಎರಡು ಕೈಗಳೇ ! ಶ್ರೀಹರಿಪೂಜೆ ಮಾಡು. ಎರಡು ಕಿವಿಗಳೇ ! ಪರಮಾತ್ಮನ ಪುಣ್ಯ ಕಥೆಗಳನ್ನು ಆಲಿಸು. ಎರಡು ಕಣ್ಣುಗಳೇ ! ಶ್ರೀ ಕೃಷ್ಣ ವಿಗ್ರಹದ ದರ್ಶನ ಮಾಡಿ ಧನ್ಯನಾಗು. ಎರಡು ಪಾದಗಳೇ ! ಶ್ರೀಹರಿಯ ಆಲಯಕ್ಕೆ ಹೋಗಿ ಬಾ. ಹೇ ನಾಸಿಕವೇ ! ಶ್ರೀಹರಿಯ ನಿರ್ಮಾಲ್ಯ ತುಲಸಿಯನ್ನು ಆಘ್ರಾಣಿಸು. ಶಿರಸೇ ! ಅಧೋಕ್ಷಜನಾದ ಶ್ರೀಹರಿಗೆ ಬಾಗಿ ನಮಿಸು.

जिह्वे कीर्तय केशवं मुररिपुं चेतो भज श्रीधरं
पाणिद्वन्द्व समर्चयाच्युतकथाः श्रोत्रद्वय त्वं श्रृणु ।
कृष्णं लोकय लोचनद्वय हरेर्गच्छांघ्रियुग्मालयं
जिघ्र घ्राण मुकुन्दपादतुलसीं मूर्धन् नमाधोक्षजम् ॥ ॥१६॥

**Jihwe ! Keerthaya Keshavam Muraripum**
**chethobhajah Shreedharam**
**Paanidwandwa ! Samarchayaachyutha kathaah**
**shrothra dwaya ! thwam shrunu**
**Krishnam lokaya lochanadwaya harayh**
**gacchaanghri yugmaalayam**
**Jighraghraana ! Mukundapaada Thulaseem**
**Moordhan ! Na Maadhokshajam** **॥16॥**

Let me repeat your name with my tongue, meditate you in mind clasped to worship Sreedhara, let me hear the great deeds of Achyutha, let my eyes fixed on Krishna, let me smell Tulạsi at your feet with my head on ground I prostrate to you.

ಹೇ ಲೋಕಾಃ ! ಶೃಣುತ ಪ್ರಸೂತಿ ಮರಣವ್ಯಾಧೇಃ ಚಿಕಿತ್ಸಾಮಿಮಾಂ
ಯೋಗಜ್ಞಾಃ ಸಮುದಾಹರಂತಿ ಮುನಯೋ ಯಾಂ ಯಾಜ್ಞವಲ್ಕ್ಯಾದಯಃ ।
ಅಂತರ್ಜ್ಯೋತಿರಮೇಯ ಮೇಕಮಮೃತಂ ಕೃಷ್ಣಾಖ್ಯಮಾಪೀಯತಾಂ
ತತ್ಪೀತಂ ಪರಮೌಷಧಂ ವಿತನುತೇ ನಿರ್ವಾಣಮಾತ್ಯಂತಿಕಮ್ ॥ ॥17॥

ಹೇ ಜನರೆ ! ಜನನ-ಮರಣಗಳೆಂಬ ಭವರೋಗಕ್ಕೆ ಔಷಧಿ ಬಲ್ಲಿರಾ ? ಯಾಜ್ಞವಲ್ಕ್ಯಾದಿ ಮುನಿಯೋಗಿಗಳ ಅಂತರಾತ್ಮನಾದ ಶ್ರೀಕೃಷ್ಣನಾಮವನ್ನು ಔಷಧಿಯಾಗಿ ಕುಡಿಯಿರಿ. ಈ ಔಷಧಿ ಕುಡಿದವರಿಗೆ ಪರಮ ಸುಖವಾದ ಮೋಕ್ಷವೇ ಸಿಗುತ್ತದಲ್ಲವೆ ?

**हे लोकाश्श्रृणुत प्रसूति-मरणव्याधेश्चिकित्सामिमां**
**योगज्ञास्समुदाहरन्ति मुनयो यां याज्ञवल्क्यादयः ।**
**अन्तर्ज्योतिरमेयमेक-ममृतं कृष्णाख्यमापीयतां**
**तत्पीतं परमौषधं वितनुते निर्वाणमात्यन्तिकम् ॥ ॥१७॥**

**Hey Lokaha ! Shrunutha Prasuthi marana vyaadheh**
**chikithsaamimaam**
**Yogagnyah Samudaaharanthi munayo yaam yaagnya valkaadayaha**
**Antharjyothirameyamekhamamrutham**
**Krishnaakhyamaapeeyathaam**
**Thathpeetham paramoushadham vithanuthe**
**nirvaanamaathyanthikam ॥17॥**

Yagnavalkya and other great sages have often said to drink the nectar of Krishna in you, the ultimate medicine to cure the disease of death and being everlasting joy.

**ಹೇ ಮರ್ತ್ಯಾಃ ಪರಮಂ ಹಿತಂ ಶೃಣುತ ವೋ ವಕ್ಷ್ಯಾಮಿ ಸಂಕ್ಷೇಪತಃ**
**ಸಂಸಾರಾರ್ಣವಮಾಪದೂರ್ಮಿಬಹುಲಂ ಸಮ್ಯಕ್ ಪ್ರವಿಶ್ಯ ಸ್ಥಿತಾಃ ।**
**ನಾನಾಽಜ್ಞಾನಮಪಾಸ್ಯ ಚೇತಸಿ ನಮೋ ನಾರಾಯಣಾಯೇತ್ಯಮುಂ**
**ಮಂತ್ರಂ ಸಪ್ರಣವಂ ಪ್ರಣಾಮ ಸಹಿತಂ ಪ್ರಾವರ್ತಯಧ್ವಂ ಮುಹುಃ ॥ ॥18॥**

ಹೇ ಮಾನವರೆ ! ಕಷ್ಟಕೋಟಲೆಗಳೆಂಬ ವಿಶಾಲ ಅಲೆಗಳಿಂದ ತುಂಬಿದ ಈ ಸಂಸಾರ ಸಾಗರದಲ್ಲಿ ಪೂರ್ತಿಯಾಗಿ ಒಳಹೊಕ್ಕಿರುವಿರಿ. ದಡವನ್ನು ಸೇರುವುದು ಕಷ್ಟಕರವಾಗಿದೆ. ನಿಮಗೆ ಒಂದು ಹಿತವಚನ ಇಲ್ಲಿದೆ. ಕೇಳಿರಿ, ನಿಮ್ಮ ಹಲವು ಬಗೆಯ ಅಜ್ಞಾನ, ಚಿಂತೆ ಹಾಗೂ ಮನೋವ್ಯಾಕುಲತೆಗಳನ್ನು ದೂರಮಾಡಿ ಶುದ್ಧಮನಸ್ಸಿನಿಂದ ಶ್ರೀಮನ್ನಾರಾಯಣ ಮಂತ್ರದ ಜಪ ಮಾಡಿ, ಇದರಿಂದ ಪಾರಾಗುವಿರಿ.

**हे मर्त्याः परमं हितं श्रृणुत वो वक्ष्यामि संक्षेपतः**
**संसारार्णवमापदूर्मिबहुळं सम्यक्प्रविश्य स्थिताः ।**
**नानाज्ञानमपास्य चेतसि नमो नारायणायेत्यमुं**
**मन्त्रं सप्रणवं प्रणामसहितं प्रावर्तयध्वं मुहुः ॥ ॥१८॥**

**Hey marthyaah paramamhitham shrunuthavo vakshyaami sankshepathaha**
**Samsaararnava maapadhoormi bahulam samyakpravishya sthithaah**
**Naanagnyanamapaasya chethasi namo Naaraayanaayaithyamum**
**Manthram sapranavam pranamasahitham praavarthayadhvam muhuhu |18||**

For the Supreme comfort of forsaking ignorance and fear of the attachment to worldly life prostate before the Lord chanting Om Namo Narayanaya.

ಪೃಥ್ವೀರೇಣುರಣುಃ ಪಯಾಂಸಿ ಕಣಿಕಾಃ ಫಲ್ಗುಃ ಸ್ಫುಲಿಂಗೋ ಲಘುಃ
ತೇಜೋ ನಿಃಶ್ವಸನಂ ಮರುತ್ತನುತರಂ ರಂಧ್ರಂ ಸುಸೂಕ್ಷ್ಮಂನಭಃ ।
ಕ್ಷುದ್ರಾ ರುದ್ರಪಿತಾಮಹ ಪ್ರಭೃತಯಃ ಕೀಟಾಃ ಸಮಸ್ತಾಸ್ಸುರಾಃ
ದೃಷ್ಟೇ ಯತ್ರ ಸ ತಾವಕೋ ವಿಜಯತೇ ಭೂಮಾವಧೂತಾವಧಿಃ ॥ ॥19॥

ಹೇ ಪರಮಾತ್ಮ ! ನಿನ್ನ ಅಪಾರ ಮಹಿಮೆಯನ್ನು ಈ ಜಗತ್ತಿನಲ್ಲಿ ಯಾವುದಕ್ಕೆ ಹೋಲಿಸಲಿ ? ಪಂಚಭೂತಗಳಿಂದ ಕೂಡಿದ ಈ ಭೂಮಿಯನ್ನು ನಿನಗೆ ಹೋಲಿಸಿದರೆ ಧೂಳಿನ ಸಣ್ಣ ಕಣದಂತೆ, ಸಾಗರಗಳ ನೀರು ನಿನ್ನ ಅನಂತ ಸ್ವರೂಪಕ್ಕೆ ಹನಿಯಂತಿದೆ. ಸೂರ್ಯ, ಅಗ್ನಿಗಳ ತೇಜಸ್ಸು ಸಣ್ಣ ಕಿಡಿಯಂತೆ ಅಲ್ಪವಾಗಿ ತೋರುತ್ತದೆ. ಬಿರುಗಾಳಿ ನಿನ್ನ ಉಸಿರಿನ ಎದುರು ನಿಲ್ಲಲಾರದು. ಆಕಾಶವೇ ಒಂದು ಸಣ್ಣ ರಂಧ್ರದಂತೆ ಕಾಣುತ್ತದೆ. ತ್ರಿಮೂರ್ತಿಗಳಿಂದ ಕೂಡಿದ ದೇವತೆಗಳು ಸಣ್ಣ ಕೀಟಗಳಂತೆ ಭಾಸವಾಗುತ್ತಾರೆ. ಮೊದಲು-ಕೊನೆಯಿಲ್ಲದ ನಿನ್ನ ಮಹಿಮೆಗಿಂತ ಹಿರಿದಾದುದು ಎಲ್ಲೂ ಇಲ್ಲ.

पृथ्वी रेणुरणुः पयांसि कणिकाः फल्गुस्फुलिङ्गोऽलघुः
तेजो निःश्वसनं मरुत् तनुतरं रन्ध्रं सुसूक्ष्मं नभः ।
क्षुद्रा रुद्रपितामहप्रभृतयः कीटास्समस्तास्सुराः
दृष्टे यत्र स तावको विजयते भूमावधूतावधिः ॥ ॥१९॥

**Prithveerenuh payaamsi kanikaah phalguhsphulingo laguhu**
**Thejo nihshvasanam marutthanutharam randhram susookshmam nabhaha**
**Kshudraa Rudra pithamaha prabhirithayaha keetaa samasthaassuraha**
**Dhrishtay yathra sa thavako vijayathe bhoomaavadhootha vadhihi ॥19॥**

How can I tell you, the land is a speck of dust, ocean is a drop of water, life a spark, winds have slowed down, the sky is a small hole, Great angels are mere insects, Your spotless purity is infinite.

ಬದ್ಧೇನಾಂಜಲಿನಾ ನತೇನ ಶಿರಸಾ ಗಾತ್ರೈಃ ಸರೋಮೋದ್ಗಮೈಃ
ಕಂಠೇನ ಸ್ವರಗದ್ಗದೇನ ನಯನೇನೋದ್ಗೀರ್ಣ ಬಾಷ್ಪಾಂಬುನಾ ।
ನಿತ್ಯಂ ತ್ವಚ್ಚರಣಾರವಿಂದಯುಗಳ ಧ್ಯಾನಾಮೃತಾಸ್ವಾದಿನಾಮ್
ಅಸ್ಮಾಕಂ ಸರಸೀರುಹಾಕ್ಷ ! ಸತತಂ ಸಂಪದ್ಯತಾಂ ಜೀವಿತಮ್ ॥ ॥20॥

ಹೇ ಕಮಲನಯನ ! ನಿನಗೆ ಶಿರಬಾಗಿ ನಾನು ಬೇಡುವುದು ಇಷ್ಟೆ, ನನ್ನ ಜೀವನ ವ್ಯರ್ಥವಾದ ಮಾರ್ಗದಲ್ಲಿ ಹೋಗದಿರಲಿ. ಸದಾ ನಿನ್ನ ದಿವ್ಯ ಮೂರ್ತಿಯ ಪೂಜೆ, ನಾಮಸ್ಮರಣೆ, ನಮಸ್ಕಾರಗಳಲ್ಲಿ ಆಸಕ್ತಿ ಉಂಟಾಗಲಿ. ನಿನ್ನ ನಮಸ್ಕಾರದಲ್ಲಿ ನನ್ನ ಶಿರಸ್ಸು, ಕಂಠವು ನಾಮ ಸಂಕೀರ್ತನೆಯಲ್ಲಿ ಗದ್ಗದಿತವಾಗಲಿ. ನಿನ್ನ ಸೇವೆಯಿಂದ ಕಣ್ಣುಗಳು ಆನಂದ ಬಾಷ್ಪ ಸುರಿಸಲಿ. ಈ ಭಾವನೆ ಸದಾ ನನ್ನಲ್ಲಿರಲೆದು ಅನುಗ್ರಹಿಸು ಎಂದು ಪ್ರಾರ್ಥಿಸುವೆ.

**बद्धेनाञ्जलिना नतेन शिरसा गात्रैस्सरोमोद्गमैः**
**कण्ठेन स्वरगद्गदेन नयनेनोद्गीर्ण-बाष्पाम्बुना ।**
**नित्यं त्वच्चरणारविन्दयुगळ-ध्यानामृतास्वादिनां**
**अस्माकं सरसीरुहाक्ष सततं संपद्यतां जीवितम् ॥ ॥२०॥**

**Baddenanjalinaa nathena shirasa Gathryaih Saromodgamaihi**
**Kanthena swaragadgadena Nayanendhgeerna bashpambunaa**
**Nithyam thwath charanaaravinda yugala dhyaanaamrithaa swadinaam**
**Asmakam sarseeruhaaksha ! Sathatham sampadyathaam jeevitham ॥20॥**

Oh, Lotus eyed one ! we are aware of meditating on you. For the nectar of benefit let me clasp my hands in prayer with head bowed down to you with eyes pouring tears and joy.

ಹೇ ಗೋಪಾಲಕ ! ಹೇ ಕೃಪಾಜಲನಿಧೇ ! ಹೇ ಸಿಂಧುಕನ್ಯಾಪತೇ !
ಹೇ ಕಂಸಾಂತಕ ! ಹೇ ಗಜೇಂದ್ರ ಕರುಣಾಪಾರೀಣ ! ಹೇ ಮಾಧವ !
ಹೇ ರಾಮಾನುಜ ! ಹೇ ಜಗತ್ತ್ರಯಗುರೋ ಹೇ ಪುಂಡರೀಕಾಕ್ಷ ಮಾಂ ।
ಹೇ ಗೋಪೀಜನನಾಥ ! ಪಾಲಯ ಪರಂ ಜಾನಾಮಿ ನ ತ್ವಾಂ ವಿನಾ ॥ ॥21॥

ಹೇ ಗೋಪಾಲ ! ಕರುಣಾಸಾಗರಾ, ಲಕ್ಷ್ಮೀಪತಿ, ಕಂಸಾಂತನೇ ಗಜೇಂದ್ರನನ್ನು ಬಿಡಿಸಿದವನೇ ಮಾಧವಾ, ಬಲರಾಮಾನುಜನೆ, ಮೂರುಲೋಕಕ್ಕೆ ಗುರುವಾದ ಪುಂಡರೀಕಾಕ್ಷ ! ಗೋಪೀಜನ ಪ್ರಿಯನೇ ನಿನ್ನ ಹೊರತು ನನಗೇನೂ ತಿಳಿದಿಲ್ಲ, ನನ್ನನ್ನು ದಯಮಾಡಿ ಸಲಹು.

हो गोपालक हे कृपाजलनिधे हे सिन्धुकन्यापते
हे कंसान्तक हे गजेन्द्र-करुणापारीण हे माधव ।
हे रामानुज हे जगत्त्रयगुरो हे पुण्डरीकाक्ष मां
हे गोपीजननाथ पालय परं जानामि न त्वां विना ॥ ॥२१॥

**Hey Gopalaka ! Hey Kripaajala nidhay ! hey sindhu kanyapathey!**
**Hey kamsanthaka ! Hey Gajendra karunaapaareena ! hey Madhava**
**Hey Ramanuja ! hey Jagthrayaguro ! Hey Pundareekaakshamaam!**
**Hey Gopeejana naatha ! paalayaparam jaanaami nathwaam vinaa ॥21॥**

Oh Gopalaka the ocean of mercy, the Lord of Lakshmi the daughter of the seas, destroyer of Kamsasura and reliever of Gajendra from crocodiles grip, Madhava the brother of Balarama, lotus eyed chief of Gopikas protect me as I know no others.

ಭಕ್ತಾಪಾಯಭುಜಂಗಗಾರುಡಮಣಿಃ ತ್ರೈಲೋಕ್ಯರಕ್ಷಾಮಣಿಃ
ಗೋಪೀಲೋಚನ ಚಾತಕಾಂಬುದಮಣಿಃ ಸೌಂದರ್ಯ ಮುದ್ರಾಮಣಿಃ ।
ಯಃ ಕಾಂತಾಮಣಿ ರುಕ್ಮಿಣೀ ಘನಕುಚದ್ವಂದ್ವೈಕ ಭೂಷಾಮಣಿಃ
ಶ್ರೇಯೋ ದೇವಶಿಖಾಮಣಿರ್ದಿಶತು ನೋ ಗೋಪಾಲಚೂಡಾಮಣಿಃ ॥ ॥22॥

ಭಕ್ತರಿಗೊದಗುವ ಕಷ್ಟಗಳೆಂಬ ಸರ್ಪಗಳಿಗೆ ಗರುಡನಂತಿರುವ, ಮೂರು ಲೋಕವನ್ನು ರಕ್ಷಿಸುವ ಗೋಪಿಕೆಯರ ಕಣ್ಣುಗಳೆಂಬ ಜಾತಕಗಳಿಗೆ ಮೋಡದಂತಿರುವ, ಸೌಂದರ್ಯರೂಪನಾದ, ರುಕ್ಮಿಣೀರಮಣನಾದ, ದೇವೋತ್ತಮನಾದ ಗೋಪಾಲ ಚೂಡಾಮಣಿಯು ನಮಗೆಲ್ಲಾ ಶ್ರೇಯಸ್ಸನ್ನು ಅನುಗ್ರಹಿಸಲಿ.

भक्तापायभुजङ्गगारुडमणि-स्त्रैलोक्यरक्षामणिः
गोपीलोचनचातकाम्बुदमणि-स्सौन्दर्यमुद्रामणिः ।
यः कान्तामणिरुक्मिणीघनकुच-द्वन्द्वैकभूषामणिः
श्रेयो देवशिखामणिर्दिशतु नो गोपालचूडामणिः ॥ ॥२२॥

**Bhakthaapaaya bhujanga gaaruda manihi thrailokya rakshaamanihi**
**Gopeelochana chaathakaambudhamanihi soundarya mudraa manihi**
**Yah kanthaamani Rukminee ghanakuchadwandwaika bhooshaamanihi**
**Shreyodeva shikhaamanirdhishathu no Gopaala choodamanini ॥22॥**

I worship you Gopala, the master of angels adorned to Rukmini your spouse to give me a spiritual light as Garuda protects us from Snake, Charm which protect the three worlds and the Lord of cloud coloured Chaataka bird among Gopikas.

ಶತ್ರುಚ್ಛೇದೈಕಮಂತ್ರಂ ಸಕಲಮುಪನಿಷದ್ ವಾಕ್ಯ ಸಂಪೂಜ್ಯ ಮಂತ್ರಂ
ಸಂಸಾರೋತ್ತಾರಮಂತ್ರಂ ಸಮುಪಚಿತ ತಮಸ್ಸಂಘನಿರ್ಯಾಣಮಂತ್ರಮ್ ।
ಸರ್ವೈಶ್ವರ್ಯೈಕಮಂತ್ರಂ ವ್ಯಸನಭುಜಗ ಸಂದಷ್ಟಸಂತ್ರಾಣಮಂತ್ರಂ ।
ಜಿಹ್ವೇ ! ಶ್ರೀಕೃಷ್ಣಮಂತ್ರಂ ಜಪ ಜಪ ಸತತಂ ಜನ್ಮಸಾಫಲ್ಯ ಮಂತ್ರಮ್ ॥ ॥23॥

ಶತ್ರುವನ್ನು ಜಯಿಸುವ ಶ್ರೀಕೃಷ್ಣನ ನಾಮಸ್ಮರಣೆಯೇ ಯಶಸ್ಸನ್ನು ಕೊಡುತ್ತದೆ. ಇದಕ್ಕೆ ಸದೃಶವಾದುದು ಯಾವುದೂ ಇಲ್ಲ. ಈ ನಾಮವೆಂಬ ಅಮೃತವನ್ನು ಸೇವಿಸುವವರು ಕಾಮ, ಕ್ರೋಧಗಳಿಗೆ ಸಿಲುಕುವುದಿಲ್ಲ. ಇದೇ ಉಪನಿಷತ್ತಿನ ಸಾರವಾಗಿದೆ. ಸಂಸಾರ ಬಂಧವನ್ನು ನಾಶಪಡಿಸುವ ಈ ಪುಣ್ಯನಾಮವು ಇಹಪರ ಸುಖಕ್ಕೆ ಸಾಧನವಾಗಿದೆ. ನಾಲಗೆಯೇ ಈ ಮಂತ್ರವನ್ನು ಸದಾ ಧ್ಯಾನಿಸು.

शत्रुच्छेदैकमन्त्रं सकलमुनिषद्वाक्यसंपूज्यमन्त्रं
संसारोत्तारमन्त्रं समुपचितमस्सङ्घनिर्याणमन्त्रम् ।
सर्वैश्वर्यैकमन्त्रं व्यसनभुजग-सन्दष्ट-सन्त्राणमन्त्रं
जिह्वे श्रीकृष्णमन्त्रं जपजप सततं जन्मसाफल्यमन्त्रं ॥ ॥२३॥

**Shathruchedaikamanthram sakalamupanishadvakya sampoojya mauthram**
**Samsaarotharamanthram samupachitha thamassangha niryaana mantharam**
**Sarvaishwaryaika mantharam vyasanabhujaga sandashta santhraana manthram**
**Jihve ! Sree Krishnamanthram japa japa sathatham janma saaphalya manthram** |23||

Krishna ! Free me from my enemies, let me have the benefits of Upanishads, to protect me from worldliness, keep me off the darkness of ignorance, protect me from evil sorrows, make me useful to pray you a meditate on you.

ವ್ಯಾಮೋಹಪ್ರಶಮೌಷಧಂ ಮುನಿಮನೋವೃತ್ತಿಪ್ರವೃತ್ತ್ಯೌಷಧಂ
ದೈತ್ಯೇಂದ್ರಾರ್ತಿಕರೌಷಧಂ ತ್ರಿಭುವನೇ ಸಂಜೀವನೈಕೌಷಧಮ್ ।
ಭಕ್ತಾತ್ಯಂತ ಹಿತೌಷಧಂ ಭವಭಯ ಪ್ರಧ್ವಂಸನೈಕೌಷಧಂ
ಶ್ರೇಯಃ ಪ್ರಾಪ್ತಿಕರೌಷಧಂ ಪಿಬ ಮನಃ ! ಶ್ರೀಕೃಷ್ಣದಿವ್ಯೌಷಧಮ್ ॥ ॥24॥

ಶ್ರೀಕೃಷ್ಣನಾಮವೆಂಬ ದಿವ್ಯೌಷಧವು ವ್ಯಾಮೋಹವನ್ನು ನಿವಾರಿಸಿ, ಯೋಗಿಗಳಿಗೆ ತಪಃಶಕ್ತಿಯನ್ನು ನೀಡುವ ಔಷಧಿಯಾಗಿದೆ. ರಾಕ್ಷಸರಿಗೆ ಭಯವುಂಟು ಮಾಡುತ್ತದೆ. ಮೂರು ಲೋಕಗಳನ್ನು ರಕ್ಷಿಸುವ ಔಷಧವಿದು. ಭವರೋಗಕ್ಕೆ ಇದು ಸಿದ್ಧೌಷಧವಾಗಿದೆ. ಭಕ್ತರಿಗೆ ಶ್ರೀಕೃಷ್ಣನೆಂಬ ನಾಮವೇ ಹಿತಕರವಾದ ಔಷಧಿ. ಸಕಲ ಪುರುಷಾರ್ಥಗಳನ್ನು ಕೊಡುವ ಶ್ರೀಕೃಷ್ಣನಾಮವೆಂಬ ದಿವ್ಯೌಷಧಿಯನ್ನು ಸೇವಿಸು.

व्यामोहप्रशमौषधं मुनिमनोवृत्तिप्रवृत्त्यौषधं
दैत्येन्द्रार्तिकरौषधं त्रिजगतां सञ्जीवनैकौषधम् ।
भक्त्यात्यन्तहितौषधं भवभयप्रध्वंसनैकौषधं
श्रेय:प्राप्तिकरौषधं पिब मनश्श्रीकृष्णादिव्यौषधम् ॥ ॥२४॥

**Vyaamohaprashamoushadham munimanovrithi**
**pravarthyoushadham**
**Dhyaithyaindraarthikaroushadham**
**thribhuvana sanjeevanaikoushadhjam**
**Bhaktyaathyantha hithoushadham**
**bhaavabhaya pradhwamsa naikoushadham**
**shreyah praapthikaroushadham**
**pibamanaki Sree Krishna divyoushadham** **॥24॥**

To cure from ignorance, to guide to the proper path, to free from the sorrows of evil doer the medicine that gives full relief, spiritual freedom is the 'Krishna Nama'.

ಆಮ್ನಾಯಾಭ್ಯಸನಾನ್ಯರಣ್ಯರುದಿತಂ ವೇದವ್ರತಾನ್ಯನ್ವಹಂ
ಮೇದಶ್ಛೇದಫಲಾನಿ ಪೂರ್ತ ವಿಧಯಃಸರ್ವೇ ಹುತಂ ಭಸ್ಮನಿ ।
ತೀರ್ಥಾನಾಮವಗಾಹನಾನಿ ಚ ಗಜಸ್ನಾನಂ ವಿನಾ ಯತ್ಪದ
ದ್ವಂದ್ವಾಂಭೋರುಹ ಸಂಸ್ಮೃತಿರ್ವಿಜಯತೇ ದೇವಃ ಸ ನಾರಾಯಣಃ ॥ ॥25॥

ಹೇ ಮನಸ್ಸೇ ! ಯಾವ ಶ್ರೀಕೃಷ್ಣನ ನಾಮಸ್ಮರಣೆಯಿಲ್ಲದೆ ವೇದಾಧ್ಯಯನ, ಗುರುಕುಲವಾಸಗಳೆಲ್ಲ ವ್ಯರ್ಥವಾಗುತ್ತದೊ, ಯಜ್ಞಮೊದಲಾದ ಕರ್ಮಗಳೆಲ್ಲ ಶರೀರ ದಂಡನೆಯಂತಾಗುವುದೊ, ಗಂಗಾ ಸ್ನಾನಾದಿಗಳು ಆನೆಯು ಸ್ನಾನ ಮಾಡಿದಂತೆಯೋ ಆದ್ದರಿಂದ, ಶ್ರೀಮನ್ನಾರಾಯಣ ನಾಮಸ್ಮರಣೆಯೋ ಸಕಲಾಭೀಷ್ಟಗಳನ್ನೂ ಕೊಡುವ ಸಾಧನವಾಗಿದೆ. ಅಂತಹ ನಾರಾಯಣನಿಗೆ ಜಯವಾಗಲಿ.

आम्नायाभ्यसनान्यरण्यरुदितं वेदव्रतान्यन्वहं
मेदश्छेदफलानि पूर्तविधयः सर्वे हुतं भस्मानि ।
तीर्थानामवगाहनानि च गजस्नानं विना यत्पद-
द्वंद्वाम्भोरुहसंस्मृती-विंजयते देवः स नारायणः ॥ ॥२५॥

**Aamnaayaabhyasanaanyaranyarudhitham vedavrathaanyanvaham**
**Medhaschedaphalaani poortha vidyah sarvay hutham bhasmani**
**Theerthaamavagaahanaani cha gajashanam vina yathpada**
**Dwandwaambhoruha samsmrithirvijayathe devassa Naaraayanaha**

**॥25॥**

If there is no faith in God even the benefits of the veda and performing rituals will be useless and is like survival of materials in the ashes of previous life, or before drowning or as incomplete bath of an elephant. Therefore pray for Narayana. He is waiting for you.

ಶ್ರೀಮನ್ನಾಮ ಪ್ರೋಚ್ಯ ನಾರಾಯಣಾಖ್ಯಂ
ಕೇನ ಪ್ರಾಪುರ್ವಾಂಛಿತಂ ಪಾಪಿನೋಽಪಿ ।
ಹಾ ! ನಃ ಪೂರ್ವಂ ವಾಕ್ ಪ್ರವೃತ್ತಾನ ತಸ್ಮಿನ್
ತೇನ ಪ್ರಾಪ್ತಂ ಗರ್ಭವಾಸಾದಿದುಃಖಮ್ ॥ ॥26॥

ನಾರಾಯಣನ ನಾಮಸ್ಮರಣೆಯಿಂದ ಪಾಪಿಗಳೂ ಕೂಡ ಇಷ್ಟಾರ್ಥಗಳನ್ನು ಪಡೆಯುತ್ತಾರೆಂದ ಮೇಲೆ ಯಾರು ಬೇಕಾದರೂ ಭಗವನ್ನಾಮಸ್ಮರಣೆ ಮಾಡಬಹುದು. ಆದರೆ ನಮದೆಂತಹ ದೌರ್ಭಾಗ್ಯ ! ನಾರಾಯಣನ ದಿವ್ಯನಾಮಸ್ಮರಣೆ ಮಾಡದೆ ಮರುಜನ್ಮ, ಗರ್ಭವಾಸ, ಸಂಸಾರದ ಕ್ಲೇಶಗಳನ್ನು ಅನುಭವಿಸುತ್ತಿದ್ದೇವಲ್ಲ. ಈ ಜನ್ಮದಲ್ಲಾದರೂ ನಾಮಸ್ಮರಣೆ ಮಾಡಿ ಧನ್ಯರಾಗೋಣ.

श्रीमन्नाम प्रोच्य नारायणाख्यं
के न प्रापुर्वाञ्छितं पापिनोऽपि ।
ह्या नः पूर्वं वाक्प्रवृत्ता न तस्मिन्
तेन प्राप्तं गर्भवासादिदुःखम् ॥ ॥२६॥

**Sreemannama Prochya Naraayanaakhyam**
**Kenapraapurvaanchitham paapinopi**
**Haa ! nah purvam vaak pravrithana thasmin**
**Thena praaptham garbhavaasaadiduhkham ॥26॥**

Just by repeating the holy name of Narayana a sinner gets relief. It is a pity that not chanting the holy name one gets all the sorrows in life.

ಮಜ್ಜನ್ಮನಃ ಫಲಮಿದಂ ಮಧುಕೈಟಬಾರೇ !
ಮತ್ಪ್ರಾರ್ಥನೀಯಮದನುಗ್ರಹ ಏಷ ಏವ ।
ತ್ವದ್‌ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ
ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ ॥ ॥27॥

ಹೇ ಮಧುಕೈಟನನ್ನು ನಿಗ್ರಹಿಸಿದವನೇ ನಾನು ಜನಿಸಿರುವುದಕ್ಕೆ ಬೇಡುವುದಿಷ್ಟೆ ನನ್ನ ಪ್ರಾರ್ಥನೆ ಏನೆಂದರೆ, ನಿನ್ನ ದಾಸದಾಸರ ಮನೆಯ ದಾಸಾನುದಾಸನಾದ ನನ್ನನ್ನು ಮಾತ್ರ ಹೇ ಜಗತ್ಪತಿ ! ಮರೆಯದಿರು.

मज्जन्मन: फलमिदं मधुकैटभारे
मत्प्रार्थनीयमदनुग्रह एष एव ।
त्वद्भृत्य भृत्य परिचारक-भृत्यभृत्य
भृत्पस्य भृत्य इति मां स्मर लोकनाथ ।। ।।२७।।

**Majjanmnah Phalamidam madhukaitabharey**
**Mathprarthaneeya madanugraha yesha yeva**
**Thath Bhrithya Bhrithaya parichaaraka Bhrithya Bhrithya**
**Bhrithrasya Bhrithya ithi maam smaralokanaatha** **॥27॥**

Oh, destroyer of Madhu and Kaitabha let there be one desire in my life, to shower on me your love. Accept me as your servant's servers' servant.

ನಾಥೇ ನಃ ಪುರುಷೋತ್ತಮೇ ತ್ರಿಜಗತಾಂ ಏಕಾಧಿಪೇ ಚೇತಸಾ
ಸೇವ್ಯೇ ಸ್ವಸ್ಯ ಪದಸ್ಯ ದಾತರಿ ಸುರೇ ನಾರಾಯಣೇ ತಿಷ್ಠತಿ ।
ಯಂ ಕಂಚಿತ್ ಪುರುಷಾಧಮಂ ಕತಿಪಯಗ್ರಾಮೇಶಮಲ್ಪಾರ್ಥದಂ
ಸೇವಾಯೈ ಮೃಗಯಾಮಹೇ ನರಮಹೋ ಮೂಢಾವರಾಕಾ ವಯಮ್ ॥ ॥28॥

ಜಗನ್ನಾಥನೂ, ಪುರುಷೋತ್ತಮನೂ ಮೂರು ಲೋಕದ ಅಧಿಪತಿಯಾದ ಆದ ಶ್ರೀಮನ್ನಾರಾಯಣನಿರುವಾಗ, ತನ್ನ ಪಾದಪದ್ಮಗಳಲ್ಲಿ ಆಶ್ರಯ ನೀಡಲು ಆ ಭಕ್ತವತ್ಸಲನು ವರದಹಸ್ತನಾಗಿರುವಾಗ ನಾವು ಒಂದಿಷ್ಟು ನೆಲದ ಒಡೆಯನಾದ ಅಲ್ಪ ಮಾನವರನ್ನು ತೃಪ್ತಿ ಪಡಿಸಲು, ಸೇವಿಸಲು ಹುಡುಕಾಡುತ್ತೇವಲ್ಲ; ನಾವೆಷ್ಟು ಮೂರ್ಖರು !

नाथे नः पुरुषोत्तमे त्रिजगतामेकाधिपे चेतसा
सेव्ये स्वस्य पदस्य दातरि सुरे नारायणे तिष्ठति ।
यं कञ्चित्पुरुषाधमं कतिपयग्रामेशमल्पार्थदं
सेवायै मृगयामहे नरमहो मूढा वराका वयम् ॥ ॥२८॥

**Naathenah purushothame thrijagatham yekadhipe chethasaa**
**Savyai swasya padasya daatharisurey naarayane thishtathi**
**Yam kanchith purushaadhamam kathipaya**
**grameshamalpaarthadham**
**Sevaayai mrigayamahe naramaho moodavarakavayam ॥28॥**

Purushothama the lord of three worlds you are the only one who can arouse devotion. When we have Narayana the Supreme Lord why should I bother about nonentities and small favours. Alas what fools we are, what ignorant we are !

ಮದನ ! ಪರಿಹರ ಸ್ಥಿತಿಂ ಮದೀಯೇ
ಮನಸಿ ಮುಕುಂದ ಪದಾರವಿಂದ ಧಾಮ್ನಿ ।
ಹರನಯನಕೃಶಾನುನಾ ಕೃಶೋಽಸಿ
ಸ್ಮರಸಿ ನ ಚಕ್ರಪರಾಕ್ರಮಂ ಮುರಾರೇ ॥ ॥29॥

ಹೇ ಮನ್ಮಥ ! ಭಗವಂತನ ಪಾದಕಮಲಗಳ ನೆಲೆಯಾದ ನನ್ನ ಮನದಲ್ಲಿ ಹೋಗಬೇಡ. ನೀನು ಒಂದು ವೇಳೆ ಅಲ್ಲಿ ಬಂದರೆ, ಬೇಗನೆ ಹೊರಡು. ಇಲ್ಲಿಂದ ತಪ್ಪಿಸಿಕೊ. ಈಗಲೇ ನೀನು ಶಿವನ ಮೂರನೆ ಕಣ್ಣಿನಿಂದ ಉರಿದು ಕೃಶನಾಗಿರುವಿ. ವಿಷ್ಣುಚಕ್ರದ ಪರಾಕ್ರಮದ ಅರಿವು ನಿನಗಿಲ್ಲವೊ ? ಅದನ್ನು ಮರೆತೆಯೊ ?

मदन परिहर स्थितिं मदीये
मनसि मुकुन्दपदारविन्दधाम्नि ।
हरनयन-कृशानुना कृशोसि
स्मरसि न चक्रपराक्रमं मुरारेः ॥ ॥२९॥

**Madana parihara sthithim madeeye**
**Manasi Mukunda padaaravinda dhaamni**
**Haranayana krishaanunaa krishosi**
**Smarasi na chakra paraakramam Muraare** **॥29॥**

Oh erotic thoughts, there is no room for you in me since there is space in my thoughts only for Mukunda. Though Shiva destroyed your erotic thoughts the revelation of splendour of Sri Krishna is great.

ತತ್ತ್ವಂ ಬ್ರುವಾಣಾನಿ ಪರಂ ಪರಸ್ಮಾತ್
ಮಧು ಕ್ಷರಂತೀವ ಸತಾಂ ಫಲಾನಿ ।
ಪ್ರಾವರ್ತಯ ಪ್ರಾಂಜಲಿರಸ್ಮಿಜಿಹ್ವೇ
ನಾಮಾನಿ ನಾರಾಯಣಗೋಚರಾಣಿ ॥ ॥30॥

ಎಲೇ ನಾಲಿಗೆಯೇ ! ಮತ್ತೊಮ್ಮೆ ನಿನಗೆ ಕೈಮುಗಿದು ಬೇಡುವೆ. ಪರತತ್ತ್ವವಾದ ನಾರಾಯಣನ ದಿವ್ಯನಾಮಗಳನ್ನು ಉಚ್ಚರಿಸು, ಅದನ್ನೇ ಸ್ಮರಿಸು. ನಾಲಿಗೆ ಮೇಲೆ ಜೇನುತುಪ್ಪ ಬಿದ್ದ ಹಾಗೆ.

तत्त्वं ब्रुवाणानि परं परस्मात्
मधु क्षरन्तीव सतां फलानि ।
प्रावर्तय प्राञ्जलिरस्मि जिह्वे
नामानि नारायणगोचराणि ॥ ॥३०॥

**Thathvam bruvanaani param parasmaath**
**Madhuksharantheeva sathaam phalaani**
**Praavarthaya praanjalirasmijihwe**
**Naamani Naraayana gocharaani** **॥30॥**

Oh tongue again and again I pray to you go on chanting the name Narayana to feel the benefits of pouring honey on to the tongue.

ಇದಂ ಶರೀರಂ ಪರಿಣಾಮಪೇಶಲಂ
ಪತತ್ಯವಶ್ಯಂ ಶ್ಲಥಸಂಧಿಜುರ್ಝರಂ ।
ಕಿಮೌಷಧೈಃ ಕ್ಲಿಶ್ಯಸಿ ಮೂಢ ದುರ್ಮತೇ
ನಿರಾಮಯಂ ಕೃಷ್ಣರಸಾಯನಂ ಪಿಬ ॥ ॥31॥

ಹೇ ಮೂಢ ಮಾನವ ! ಇದು ನಶಿಸುವ ದೇಹ, ಶಾಶ್ವತವಾದುದಲ್ಲ. ವಯಸ್ಸಾಗುತ್ತಿದ್ದಂತೆ ದೇಹವು ಕೃಶವಾಗಿ, ಕೀಲುಗಳು ಸಡಿಲವಾಗುತ್ತದೆ. ಅದೂ ಒಂದು ದಿನ ಬಿದ್ದುಹೋಗುತ್ತದೆ. ಸುಮ್ಮನೆ ನಾನಾ ಬಗೆಯ ಔಷಧೋಪಚಾರಗಳಿಂದ ಯಾಕೆ ಕಷ್ಟ? ಎಂದೆಂದಿಗೂ ನಿರೋಗಿಯಾಗಿ ಮಾಡಬಲ್ಲ ಶ್ರೀಕೃಷ್ಣನಾಮವೆಂಬ ರಸಾಯನವನ್ನು ಸೇವಿಸು.

इदं शरीरं परिणामपेशलं
पतत्यवश्यं श्लथसन्धिजर्जरम् ।
किमौषधैः क्लिश्यसि मूढ दुर्मते
निरामयं कृष्णरसायनं पिब ॥ ॥३१॥

**Idham shareeram parinaama peshalam**
**Pathathyavashyam shlathasandhi jarjharam**
**Kimoushadhayhi klishyasi moodha dhurmathey**
**Niraamayam Krishnarasayanam piba** **॥31॥**

The body loses its strength, it is not permanent. No medicine will stop deteriorating body. Drink the divine medicine of chanting Krishna Nama.

ದಾರಾ ವಾರಾಕರವರಸುತಾ ತೇ ತನೂಜೋ ವಿರಿಂಚಿಃ
ಸ್ತೋತಾ ವೇದಸ್ತವ ಸುರಗಣೋ ಭೃತ್ಯವರ್ಗಃ ಪ್ರಸಾದಃ ।
ಮುಕ್ತಿರ್ಮಾಯಾ ಜಗದವಿಕಲಂ ತಾವಕೀ ದೇವಕೀ ತೇ
ಮಾತಾ ಮಿತ್ರಂ ಬಲರಿಪುಸುತಃ ತ್ವಯ್ಯತೋಽನ್ಯನ್ನಜಾನೇ ॥ ॥32॥

ಹೇ ಪರಮಾತ್ಮ ! ಸಮುದ್ರರಾಜನ ಮಗಳಾದ ಮಹಾಲಕ್ಷ್ಮಿ ನಿನ್ನ ಪತ್ನಿ. ಸೃಷ್ಟಿಕರ್ತನಾದ ಬ್ರಹ್ಮದೇವನು ನಿನ್ನ ಮಗ. ವೇದಗಳು ಸದಾ ನಿನ್ನನ್ನು ಸಂಕೀರ್ತನೆ ಮಾಡುವುದರಲ್ಲಿ ತೊಡಗಿವೆ. ಸಕಲ ದೇವತಾಗಣವೂ ನಿನ್ನ ಸೇವಕರೇ.

दारा वाराकरवरसुता ते तनूजो विरिंश्चिः
स्तोता वेदस्तव सुरगणो भृत्यवर्गः प्रसादः ।
मुक्तिर्माया जगदविकलं तावकी देवकी ते
माता मित्रं बलरिपुसुतस्त्वय्यतोऽन्यत्र जाने ॥ ॥३२॥

**Dharaavaaraakaravarasuthaa they thanoojo virinchini**
**Sthothaa Vedasthava suragano Bhrithya vargah prasaadaha**
**Mukthirmaaya Jagadavikalam thavakee Devakeethe**
**Maatha mithram balaripusuthah thwayyatho anyannajaane ॥32॥**

Oh God, the daughter of Samudra Raja is your spouse, Brahma is your son, Vedas make prayers to you. The angels are your servants. Let me worship you.

ಕೃಷ್ಣೋ ರಕ್ಷತು ನೋ ಜಗತ್ತ್ರಯ ಗುರುಃ ಕೃಷ್ಣಂ ನಮಸ್ಯಾಮ್ಯಹಂ
ಕೃಷ್ಣೇನಾಮರಶತ್ರವೋ ವಿನಿಹತಾಃ ಕೃಷ್ಣಾಯ ತಸ್ಮೈ ನಮಃ ।
ಕೃಷ್ಣಾದೇವ ಸಮುತ್ಥಿತಂ ಜಗದಿದಂ ಕೃಷ್ಣಸ್ಯ ದಾಸೋಽಸ್ಮ್ಯಹಂ
ಕೃಷ್ಣೇ ತಿಷ್ಠತಿ ಸರ್ವಮೇತದಖಿಲಂ ಹೇ ಕೃಷ್ಣ ! ರಕ್ಷಸ್ವಮಾಮ್ ॥ ॥33॥

ಮೂರು ಲೋಕಗಳಿಗೂ ಗುರುವಾದ ಶ್ರೀಕೃಷ್ಣನನ್ನು ನಮಸ್ಕರಿಸುವೆ. ಕೃಷ್ಣನು ನನ್ನನ್ನು ಕಾಪಾಡಲಿ. ಶ್ರೀಕೃಷ್ಣನಿಂದ ಅಸುರರು ಹತರಾದರು. ಶ್ರೀಕೃಷ್ಣನಿಗೆ ನಮಸ್ಕಾರ. ಶ್ರೀಕೃಷ್ಣನ ದೆಸೆಯಿಂದ ಈ ಜಗತ್ತು ಸೃಷ್ಟಿಯಾಗಿದೆ. ನಾನು ಶ್ರೀಕೃಷ್ಣನ ದಾಸ. ಸಮಸ್ತ ವಿಶ್ವವೂ ಶ್ರೀಕೃಷ್ಣನಲ್ಲೇ ನೆಲೆಯಾಗಿದೆ. ಹೇ ಕೃಷ್ಣ! ನನ್ನನ್ನು ರಕ್ಷಿಸು.

कृष्णो रक्षतु नो जगत्त्रय गुरुः कृष्णं नमस्याम्यहं
कृष्णेनामरशत्रवो विनिहताः कृष्णाय तस्मै नमः ।
कृष्णादेव समुत्थितं जगदिदं कृष्णस्य दासोऽस्म्यहं
कृष्णे तिष्ठति सर्वमेतदखिलं हे कृष्ण रक्षस्व माम् ॥ ॥३३॥

**Krishno rakshathuno Jagathraya guruh**
**Krishnam namasyaamyaham**
**Krishneenaamara shathravo vinithathaah**
**Krishnaaya thasmai namaha**
**Krishnaadeva samuthitham jagadidam Krishnasya dasosmyaham**
**Krishne thishtathi sarvamethadakhilam**
**hey Krishna ! rakshasvamaam.** **॥33॥**

Let the Lord protect me, I salute to you. With the help of Krishna the angels destroyed their enemies. It is the Lord who created this world. Everything exists due to Lord Krishna.

ತಸ್ತ್ವಂ ಪ್ರಸೀದ ಭಗವನ್ ! ಕುರು ಮಯ್ಯನಾಥೇ
ವಿಷ್ಣೋ ! ಕೃಪಾಂ ಪರಮ ಕಾರುಣಿಕಃ ಕಿಲ ತ್ವಮ್ ।
ಸಂಸಾರ ಸಾಗರ ನಿಮಗ್ನಮನಂತ ದೀನಮ್
ಉದ್ಧರ್ತುಮರ್ಹಸಿ ಹರೇ ! ಪುರುಷೋತ್ತಮೋಽಸಿ ॥ ॥34॥

ಹೇ ಭಗವಂತ ! ಸರ್ವವ್ಯಾಪ್ತನೆ ! ನನಗೆ ಪ್ರಸನ್ನನಾಗು. ಅನಾಥನಾದ ನನ್ನಲ್ಲಿ ದಯೆ ತೋರಿಸು. ಹೇ ವಿಷ್ಣು! ನೀನು ಪರಮಕರುಣಾ ಶಾಲಿಯಾಗಿದ್ದೀಯೆ ಹೇ ಅನಂತನೆ! ಸಂಸಾರವೆಂಬ ಸಾಗರದಲ್ಲಿ ಮುಳುಗಿ ತೊಳಲಾಡುತ್ತಿರುವ ಈ ದೀನವನ್ನು ಉದ್ಧರಿಸಲು ನೀನಲ್ಲದೆ ಬೇರೆಯವರಾರು ? ಹೇ ಶ್ರೀಹರಿ ! ನೀನೇ ಪರಮ ಪುರುಷೋತ್ತಮ.

तत्त्वं प्रसीद भगवन् कुरु मय्यनाथे
विष्णो कृपां परमकारुणिकः किल त्वम् ।
संसार सागर निमग्नमनन्त दीनँ
उद्धर्तुमर्हसि हरे पुरुषोत्तमोऽसि ॥ ॥३४॥

**Tathavam praseeda Bhagavan kuru mayyanathey**
**Vishno ! Kripaam parama kaarunikah kilathwam**
**Samsaara sagara nimaghnamantha deenam**
**Uddharthomarhasi Hare ! Purushothamosi** **॥34॥**

Oh Hari, Purushothama, please enter in to my soul, I am an orphan you are the Supreme cause of things, please relieve me from worldliness and elevate me.

ನಮಾಮಿ ನಾರಾಯಣಪಾದಪಂಕಜಂ
ಕರೋಮಿ ನಾರಾಯಣಪೂಜನಂ ಸದಾ ।
ವದಾಮಿ ನಾರಾಯಣನಾಮ ನಿರ್ಮಲಂ
ಸ್ಮರಾಮಿ ನಾರಾಯಣ ತತ್ತ್ವಮವ್ಯಯಮ್ ॥ ॥35॥

ನಾರಾಯಣನ ಪಾದಕಮಲಗಳಿಗೆ ಸದಾ ನಮಸ್ಕರಿಸುತ್ತೇನೆ. ಆತನ ಪಾದ ಸೇವೆಯನ್ನು ಮಾಡುತ್ತೇನೆ. ಸದಾ ನಾರಾಯಣನ ದಿವ್ಯನಾಮ ಸಂಕೀರ್ತನೆ ಮಾಡುತ್ತೇನೆ. ಪರಬ್ರಹ್ಮನನ್ನೇ ಸದಾ ಸ್ಮರಿಸುತ್ತಿರುತ್ತೇನೆ.

नमामि नारायणपादपङ्कजं
करोमि नारायणपूजनं सदा ।
वदामि नारायणनाम निर्मलं
स्मरामि नारायण-तत्त्वमव्ययम् ॥ ॥३५॥

**Namaami Naraayana paadapankajam**
**Karomi Naarayana poojanam sadhaa**
**Vadami narayana naama nirmalam**
**Smaraami Narayana thathvamavyayam** ॥35॥

Oh Narayana I prostrate at your feet, I worship you, always I meditate on your pure and holy name, may my thoughts rest on your supreme knowledge.

ಶ್ರೀನಾಥ ನಾರಾಯಣ ವಾಸುದೇವ
ಶ್ರೀಕೃಷ್ಣ ಭಕ್ತಪ್ರಿಯ ಚಕ್ರಪಾಣೇ ।
ಶ್ರೀಪದ್ಮನಾಭಾಚ್ಯುತ ಕೈಟಭಾರೇ
ಶ್ರೀರಾಮ ಪದ್ಮಾಕ್ಷ, ಹರೇ ಮುರಾರೇ ॥ ॥36॥

ಭಗವಂತನ ಪುಣ್ಯ ನಾಮಗಳಾದ ಶ್ರೀನಾಥ, ನಾರಾಯಣ, ವಾಸುದೇವ, ಶ್ರೀಕೃಷ್ಣ ಭಕ್ತರಿಗೆ ಪ್ರಿಯ, ಚಕ್ರಪಾಣಿ, ಪದ್ಮನಾಭ, ಅಚ್ಯುತ, ಶ್ರೀರಾಮ, ದಾಮೋದರ, ಮಾಧವ ಹರೇ ಹರೇ.

श्रीनाथ नारायण वासुदेव
श्रीकृष्ण भक्तप्रिय चक्रपाणे ।
श्रीपद्मनाभाच्युत कैटभारे
श्रीराम पद्माक्ष हरे मुरारे ॥३६॥

**Srinatha Narayana Vasudeva**
**Sreekrishna Bhakthapriya Chakrapane**
**Sri Padmanabhachyutha kaitabharey**
**Sri Rama Padmaksha Hare Murarey** **॥36॥**

Even if we have strength fail to call your names, Anantha Vaikuntha, Mukunda, Krishna, Govinda, Damodara, Madhava. How long we will be lost in the sorrows of the world.

ಅನಂತ ವೈಕುಂಠ ಮುಕುಂದ ಕೃಷ್ಣ
ಗೋವಿಂದ ದಾಮೋದರ ಮಾಧವೇತಿ ।
ವಕ್ತುಂ ಸಮರ್ಥೋಽಪಿ ನ ವಕ್ತಿಕಶ್ಚಿತ್
ಅಹೋ ಜನಾನಾಂ ವ್ಯಸನಾಭಿಮುಖ್ಯಮ್ ॥ ॥37॥

ಭಗವಂತನ ಪುಣ್ಯನಾಮಗಳಾದ ಅನಂತ, ವೈಕುಂಠ, ಮುಕುಂದ, ಕೃಷ್ಣ ಗೋವಿಂದ, ದಾಮೋದರ, ಮಾಧವ ನಿನ್ನನ್ನು ಧ್ಯಾನಿಸಲು ನನಗೆ ಶಕ್ತಿ ಇದ್ದರೂ ನಿನ್ನನ್ನು ಸ್ಮರಿಸದೆ ಇನ್ನೂ ಎಷ್ಟು ದಿನ ವ್ಯಸನದಿಂದ ಹೀಗಿರಬೇಕು ?

अनन्त वैकुण्ठ मुकुन्द कृष्ण
गोविन्द दामोदर माधवेति ।
वक्तुं समर्थोऽपि न वक्ति कश्चित्
अहो जनानां व्यसनाभिमुख्यम् ॥ ॥ ३७ ॥

**Anantha Vaikuntha Mukunda Krishna**
**Govinda Damodara Madhavethi**
**Vakthum Samarthopi na vakthi kaschith**
**Aho janaanaam vyasanaabhi mukhyam** **॥37॥**

Lord of Lakshmi, Narayana, Vasudeva, Sri Krishna, Bhakta Priya, Chakrapani, Padmanabha, Achyutha, Khaitabhari, Sri Rama, Damodara Madhava, Murare, Hare, Hare.

ಧ್ಯಾಯಂತಿ ಯೇ ವಿಷ್ಣುಮನಂತಮವ್ಯಯಂ
ಹೃತ್ಪದ್ಮಮಧ್ಯೇ ಸತತಂ ವ್ಯವಸ್ಥಿತಮ್ ।
ಸಮಾಹಿತಾನಾಂ ಸತತಾಽಭಯಪ್ರದಂ
ತೇ ಯಾಂತಿ ಸಿದ್ಧಿಂ ಪರಮಾಂ ಚ ವೈಷ್ಣವೀಮ್ ॥ ॥38॥

ಯಾರು ಸರ್ವಾಂತರ್ಯಾಮಿಯೂ, ಅನಂತಮಹಿಮೂ, ಯೋಗಿಗಳಿಗೆ ಸರ್ವದಾ ಅಭಯಪ್ರದನೂ ಆದ ಶ್ರೀಹರಿಯನ್ನು ಭಕ್ತಿಯಿಂದ ಧ್ಯಾನಿಸುವರೋ ಅವರು ಸರ್ವಶ್ರೇಷ್ಠವಾದ ವಿಷ್ಣು ಸಾನ್ನಿಧ್ಯವನ್ನು ಪಡೆಯುತ್ತಾರೆ.

ध्यायन्ति ये विष्णुमनन्तमव्ययं
हृत्पद्ममध्ये सततं व्यवस्थितम् ।
समाहितानां सतताभयप्रदं
ते यान्ति सिद्धिं परमाञ्च वैष्णवीम् ॥ ॥३८॥

**Dhyayanthi ye Vishnumananthamavyayam**
**Hrithpadma madhye sathatham vyavasthitham**
**Samaahithaanaam sathathaabhaya pradam**
**Theyaanthi siddhim paramaam cha Vaishnaveem** **॥38॥**

With the mind unattatched, all pervading Vishnu will always give the rewards of fearlessness and supreme knowledge of Lord. Worship Him.

ಕ್ಷೀರಸಾಗರತರಂಗಶೀಕರ
ಅಸಾರತಾರಕಿತಚಾರುಮೂರ್ತಯೇ ।
ಭೋಗಿಭೋಗಶಯನೀಯಶಾಯಿನೇ
ಮಾಧವಾಯ ಮಧುವಿದ್ವಿಷೇ ನಮಃ ॥ ॥39॥

ದಿವ್ಯಮಂಗಳ ವಿಗ್ರಹನಾದ ಯಾವ ಶ್ರೀಹರಿಯ ಸುಂದರ ರೂಪದ ಮೇಲೆ ಕ್ಷೀರಸಾಗರದ ಅಲೆಗಳಿಂದ ಹೊರಟ ನೀರಿನ ಹನಿಗಳು ಹಾರಿ, ಆಕಾಶದ ತಾರೆಗಳಂತೆ ಶೋಭಿಸುತ್ತಿದೆಯೋ, ಶೇಷ ಶಯನವಾಗಿ ಆನಂದ ರೂಪನಾದ ಆ ಮಧುಸೂದನಾದ ಲಕ್ಷ್ಮೀಪತಿಗೆ ನಮಸ್ಕಾರಗಳು.

क्षीरसागर-तरङ्गशीकर
असार-तारकित-चारुमूर्तये ।
भोगिभोग-शयनीयशायिने
माधवाय मधुविद्विषे नमः ॥ ॥३९॥

**Ksheerasagara tharanga sheekara**
**Asaara tharakitha chaarumurthaye**
**Bhogi Bhoga shayaneeyashaayiney**
**Madhavaaya Madhu Vidhvishe namaha** **॥39॥**

In mystic sleep His beautiful form reclining on Adishesha seems as though star speckled by the spray of milk from ocean; Oh Madhava destroyer of Madhu "I woship you".

ಯಸ್ಯ ಪ್ರಿಯೌ ಶ್ರುತಿಧರೌ ಕವಿಲೋಕವೀರೌ
ಮಿತ್ರೇ ದ್ವಿಜನ್ಮವರಪದ್ಮಶರಾವಭೂತಾಮ್।
ತೇನಾಂಬುಜಾಕ್ಷ ಚರಣಾಂಬುಜ ಷಟ್ಪದೇನ
ರಾಜ್ಞಾ ಕೃತಾ ಕೃತಿರಿಯಂ ಕುಲಶೇಖರೇಣ॥ ॥40॥

ಈ ಮುಕುಂದಮಾಲಾ ಸ್ತೋತ್ರವು ಬ್ರಾಹ್ಮಣೋತ್ತಮರಾದ ದ್ವಿಜನ್ಮವರ ಪದ್ಮಶರರ ಮಿತ್ರರೂ, ಕಮಲಾಕ್ಷನಾದ ನಾರಾಯಣನ ದಿವ್ಯ ಪಾದ ಕಮಲದಲ್ಲಿದುಂಬಿಯಂತೆ ಸದಾ ಆಸಕ್ತರೂ ಆದ ರಾಜಾ ಕುಲಶೇಖರರಿಂದ ರಚಿಸಲ್ಪಟ್ಟಿದೆ.

ಆಳ್ವಾರ್ ಕುಲಶೇಖರರ ಪಾದಪದ್ಮಗಳಿಗೆ ವಂದನೆಗಳು.

यस्य प्रियौ श्रुतिधरौ कविलोकवीरौ
मित्रे द्विजन्मवर-पद्मशरावभूताम् ।
तेनाम्बुजाक्ष-चरणाम्बुज-षट्पदेन
राज्ञा कृता कृतिरियं कुलशेखरेण ॥ ॥४०॥

कुलशेखराळ्वार् चरणं शरणं प्रपद्ये ।

**Yaysa Priyow shruthadharow kavilokaveerow**
**Mithrey dwijanmavara padma sharaavabhoothaam**
**Thenambujaksha charanambuja shatpadena**
**Raagnya krithaa krithiriyam Kulashekharena** **॥40॥**

Dedicated to beloved friends Vara and Padma versed in vedas or peers in the realm of poetry Kulasekhara in adoration at the lotus feet of Lord Vishnu was inspired to write this poem.

I prostrate at the Lotus feet of Sri Kulashekhara Alwar.

